CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಡಿಸೆಂಬರ್ ೧, ೨೦೦೫ (ಮಾರ್ಗಶಿರ ೧೦, ಶಕ ವರ್ಷ ೧೯೨೭) | ಸಂಚಿಕೆ ೪೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬೆಣಕಲ್ಲು ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ಭೂಸ್ವಾಧೀನಾಧಿಕಾರಿಗಳು ನೀಡಿದ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ದಿನಾಂಕ: 11/03/2005ರ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಭೂಸ್ವಾಪ್ರ/2005-06/1190.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 11.03.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬೆಣಕಲ್ಲು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ನೀಡಿದ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.2,68,396-00 ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಕರಣದ ವಿವರಗಳು ಈ ಕೆಳಕಂಡಂತಿದೆ:

ಬಳ್ಳಾರಿ ಜಿಲ್ಲೆ, ಬೆಣಕಲ್ಲು ಕೆರೆ ನಿರ್ಮಾಣಕ್ಕಾಗಿ ಒಟ್ಟು 85-46 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆ ಕಲಂ 4(1) ರಡಿ ಅಧಿಸೂಚನೆಯನ್ನು ದಿನಾಂಕ: 18.01.1996 ರಂದು ಹಾಗೂ ಕಲಂ 6(1)ರ ಅಧಿಸೂಚನೆಯನ್ನು ದಿನಾಂಕ: 01.02.1997 ರಂದು ಹೊರಡಿಸಲಾಗಿದೆ. ಸ್ವಾಧೀನಕ್ಕೊಳಪಟ್ಟ ಜಮೀನುಗಳಿಗೆ ಪರಿಹಾರ ಧನದ ಐತೀರ್ಪನ್ನು ದಿನಾಂಕ: 17.07.1997 ರಂದು ಹೊರಡಿಸಲಾಗಿದೆ.

ಐತೀರ್ಪಿನಂತೆ ಪರಿಹಾರಧನ ಪಡೆದ ಕೆಲವು ಭೂಮಾಲೀಕರು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ 18(1) ರನ್ವಯ ಹೊಸಪೇಟೆಯ ಸಿವಿಲ್ ಜಡ್ಜ್ ರವರ (ಹಿರಿಯ ಶ್ರೇಣಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿ, ಈ ಪ್ರಕರಣಗಳು ಎಲ್.ಎ.ಸಿ. ಸಂಖ್ಯೆ: 15/99 ಮತ್ತು 63/99 ರಲ್ಲಿ ವಿಚಾರಣೆಗೊಂಡು ನ್ಯಾಯಾಲಯವು ಹೆಚ್ಚಿನ ಪರಿಹಾರಧನಕ್ಕೆ ತೀರ್ಪು ನೀಡಿದೆ ಹಾಗೂ ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಪತ್ರ ಸಂಖ್ಯೆ: ಲಾ 643 ಎಲ್ಎಸ್‌ಜಿ 2002, ದಿನಾಂಕ: 26.10.2002 ರಲ್ಲಿ ಅಭಿಪ್ರಾಯ ನೀಡಿದೆ.

ಎಲ್.ಎ.ಸಿ. ಸಂಖ್ಯೆ: 15/99 ಮತ್ತು 63/99ರ ತೀರ್ಪನ್ನು ಉಲ್ಲೇಖಿಸಿ ತಮ್ಮ ಜಮೀನುಗಳೂ ಸಹ ಅವರಿಗೆ ಪರಿಹಾರ ಧನ ನೀಡಿದ ಕಲಂ 4(1) ರಲ್ಲಿ ಸೇರಿರುವುದಾಗಿ ನ್ಯಾಯಾಲಯವು ಹೆಚ್ಚಿಸಿರುವ ಪರಿಹಾರಧನವನ್ನು ತಮಗೂ ಅನ್ವಯವಾಗುವಂತೆ ಹಗರಿಬೊಮ್ಮನಹಳ್ಳಿ ತಾಲ್ಲೂಕು ಬೆಣಕಲ್ಲು ಗ್ರಾಮದ ಸ.ನಂ.609ಸಿ (ವಿಸ್ತೀರ್ಣ 3.37 ಎಕರೆ) ಮತ್ತು 609ಎ (ವಿಸ್ತೀರ್ಣ 1.49 ಎಕರೆ) ಭೂಮಾಲೀಕರು ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ಕೋರಿದ್ದರ ಮೇರೆಗೆ ಈ ಪ್ರಕರಣದಲ್ಲಿ ವಿಚಾರಣೆ ನಡೆಸಿ ಸಹಾಯಕ ಆಯುಕ್ತರು ಹಾಗೂ ಭೂಸ್ವಾಧೀನಾಧಿಕಾರಿಗಳು ಹೊಸಪೇಟೆ ಇವರು ಈ ಜಮೀನುಗಳಿಗೆ ಹೆಚ್ಚಿನ ಪರಿಹಾರ ಧನವನ್ನು ಭೂಸ್ವಾಧೀನ ಕಾಯ್ದೆ ಕಲಂ 28(ಎ) ರಡಿ ದಿನಾಂಕ: 24.03.2003 ರಂದು ಐತೀರ್ಪನ್ನು ಪ್ರಕಟಿಸಿರುತ್ತಾರೆ.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 155 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬೆಣಕಲ್ಲು ಗ್ರಾಮದ ಕೆರೆಗಾಗಿ ಸ್ವಾಧೀನಪಡಿಸಿಕೊಂಡಿರುವ ಬೆಣಕಲ್ಲು ಗ್ರಾಮದ ಸ.ನಂ.609ಸಿ ಯಲ್ಲಿರುವ 3.37 ಎಕರೆ ಹಾಗೂ 609ಎ ರಲ್ಲಿಯ 1.49 ಎಕರೆ ಸೇರಿ ಒಟ್ಟು 4.86 ಎಕರೆ ಜಮೀನಿಗೆ ಭೂಸ್ವಾಧೀನ

ಕಾಯ್ದೆ ಕಲಂ 28(ಎ) ರಡಿ ಸಹಾಯಕ ಆಯುಕ್ತರು ಹಾಗೂ ಭೂಸ್ವಾಧೀನಾಧಿಕಾರಿಗಳು, ಹೊಸಪೇಟೆ ಇವರು ನೀಡಿದ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ರೂ.2,68,396-00 ಗಳನ್ನು (ಎರಡು ಲಕ್ಷದ ಅರವತ್ತೆಂಟು ಸಾವಿರದ ಮುನ್ನೂರ ತೊಂಭತ್ತಾರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಸರ್ಕಾರಕ್ಕೆ ಅಧಿಕ ಆರ್ಥಿಕ ವೆಚ್ಚವಾಗದಂತೆ ಪಾವತಿಸುವುದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಪ್ರಸ್ತಾವನೆಯಲ್ಲಿ ತಿಳಿಸಿರುವ ಸರ್ವೆ ನಂಬರ್ ಜಮೀನು ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ವರ್ಗಾಯಿಸಿಕೊಳ್ಳುವ ಬಗ್ಗೆ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003 ದಿನಾಂಕ: 12.6.2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1416

**ಎಂ.ಎನ್. ಮಂಜುನಾಥ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಶಿಕ್ಷಣ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಶಾಲಾಗುಣಮಟ್ಟ ಮೌಲ್ಯಾಂಕನ ಸಂಸ್ಥೆಗೆ 7 ಹುದ್ದೆಗಳ ಸೃಜನೆ-ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ಹುದ್ದೆಗಳ ಸ್ಥಳಾಂತರ-ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** ಟಿಪ್ಪಣಿ ಸಂಖ್ಯೆ: ಸಿ1(1) ಕ.ರಾ.ಶಾ.ಗು.ಮ.ಪ್ರೌ.ಸಂ. ಹುದ್ದೆ-ಸೃಜನೆ-ಸ್ಥಳಾಂತರ/2005-06, ದಿನಾಂಕ: 18.06.2005 ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.

**ಪ್ರಸ್ತಾವನೆ:**

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ 18.6.2005ರ ಟಿಪ್ಪಣಿಯಲ್ಲಿ 1 ರಿಂದ 10ನೇ ತರಗತಿವರೆಗಿನ ಮಕ್ಕಳ ಕಲಿವಿನ ಮೌಲ್ಯಮಾಪನ, ಕಲಿಕೆಯಮಟ್ಟದ ಮೌಲ್ಯಮಾಪನಕ್ಕಾಗಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಇಲ್ಲಿ ಕರ್ನಾಟಕ ಶಾಲಾ ಗುಣಮಟ್ಟ ಮೌಲ್ಯಾಂಕನ ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ ಅಗತ್ಯವಾದ ಸಿಬ್ಬಂದಿಯನ್ನು ಗುರುತಿಸಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಹಾಲಿ ಚಾಲ್ತಿಯಲ್ಲಿರುವ ಅನಗತ್ಯ ಹುದ್ದೆಗಳನ್ನು ವರ್ಗಾಯಿಸುವ ಮೂಲಕ ತುಂಬಲು ಪ್ರಸ್ತಾಪಿಸಿ ಈ ಕೆಳಕಂಡ ಹುದ್ದೆಗಳನ್ನು ವರ್ಗಾವಣೆ ಮೂಲಕ ತುಂಬಲು ಸರ್ಕಾರದ ಅನುಮತಿ ಕೋರಿದ್ದಾರೆ.

| | | |
|---|---|---|
| 1. | ಉಪ ನಿರ್ದೇಶಕರು | 1 ಹುದ್ದೆ |
| 2. | ಸಹಾಯಕ ಕಾರ್ಯಕ್ರಮ ಅಧಿಕಾರಿ | 2 ಹುದ್ದೆಗಳು |
| 3. | ಅಧೀಕ್ಷಕರು | 1 ಹುದ್ದೆ |
| 4. | ಪ್ರಥಮ ದರ್ಜೆ ಸಹಾಯಕರು | 2 ಹುದ್ದೆಗಳು |
| 5. | ಎರಡನೇ ದರ್ಜೆ ಸಹಾಯಕ | 1 ಹುದ್ದೆ |

ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 321 ಯೋಯೋಕ 2005, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2005**

**(ಇಡಿ 49 ಸ್ಟೀಮರ (ಯೂನಿಕ್) 2005, ದಿನಾಂಕ: 10.10.2005)**

ಸರ್ಕಾರವು ಕರ್ನಾಟಕ ರಾಜ್ಯ ಶಾಲಾ ಗುಣಮಟ್ಟ ಮೌಲ್ಯಾಂಕನ ಸಂಸ್ಥೆಗೆ ಅಗತ್ಯವಾದ 7 ಹುದ್ದೆಗಳನ್ನು ಸೃಜಿಸಿ ಅವುಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಚಾಲ್ತಿಯಲ್ಲಿದ್ದು ಅನಗತ್ಯವಾದ ಈ ಕೆಳಕಂಡ ಹುದ್ದೆಗಳನ್ನು ವರ್ಗಾಯಿಸುವ ಮೂಲಕ ತುಂಬಬೇಕೆಂದು ಈ ಮೂಲಕ ಆದೇಶಿಸುತ್ತದೆ.

| | | |
|---|---|---|
| 1. | ಉಪ ನಿರ್ದೇಶಕರು<br>(ಉರ್ದು ಮತ್ತು ಇತರೆ ಅಲ್ಪಸಂಖ್ಯಾತ ಭಾಷಾ ನಿರ್ದೇಶನಾಲಯ) | 1 ಹುದ್ದೆ |
| 2. | ಸಹಾಯಕ ಕಾರ್ಯಕ್ರಮ ಅಧಿಕಾರಿ | 2 ಹುದ್ದೆಗಳು |
| 3. | ಅಧೀಕ್ಷಕರು | 1 ಹುದ್ದೆ |
| 4. | ಪ್ರಥಮ ದರ್ಜೆ ಸಹಾಯಕರು | 2 ಹುದ್ದೆಗಳು |
| 5. | ಎರಡನೇ ದರ್ಜೆ ಸಹಾಯಕ | 1 ಹುದ್ದೆ |
| | **ಒಟ್ಟು** | **7 ಹುದ್ದೆಗಳು** |

ಮೇಲಿನ ಸೃಜನೆ ಮತ್ತು ಸ್ಥಳಾಂತರದಿಂದ ಸರ್ಕಾರಕ್ಕೆ ಯಾವುದೇ ಹೆಚ್ಚುವರಿ ವೆಚ್ಚ ಉಂಟಾಗತಕ್ಕದಲ್ಲ. ಹುದ್ದೆಗಳನ್ನು ಕರ್ನಾಟಕ ರಾಜ್ಯ ಶಾಲಾ ಗುಣಮಟ್ಟ ಮೌಲ್ಯಾಂಕನ ಸಂಸ್ಥೆ (ಕೆಎಸ್‌ಕ್ಯೂಎಬಿ)ಗೆ ವರ್ಗಾಯಿಸುತ್ತಿದ್ದಂತೆಯೇ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಈ ಕೆಳಕಂಡ ಹುದ್ದೆಗಳನ್ನು ರದ್ದುಪಡಿಸಬೇಕು.

ಅ) ಸಾರ್ವಜನಿಕ ಶಿಕ್ಷಣ ಇಲಾಖೆಯ ಉರ್ದು ಮತ್ತು ಇತರೆ ಅಲ್ಪಸಂಖ್ಯಾತ ಭಾಷಾ ಸಂಸ್ಥೆಗಳ ನಿರ್ದೇಶನಾಲಯದ ಉಪನಿರ್ದೇಶಕರ 1 ಹುದ್ದೆ.

ಆ) ಸಾರ್ವಜನಿಕ ಶಿಕ್ಷಣ ಇಲಾಖೆಯ ಬೆಳಗಾವಿ ವಿಭಾಗೀಯ ಕಛೇರಿಯಲ್ಲಿ ಇರುವ ಮರಾಠಿ ಭಾಷೆಯ 4 ಪರಿವೀಕ್ಷಕರ ಹುದ್ದೆಗಳ ಪೈಕಿ 2 ಹುದ್ದೆಗಳು.

ಇ) ಸಾರ್ವಜನಿಕ ಶಿಕ್ಷಣ ಇಲಾಖೆಯ ವಿಭಾಗೀಯ ಸಹ ನಿರ್ದೇಶಕರ ಕಛೇರಿಗಳಲ್ಲಿ ತಲಾ 2 ರಂತೆ ಇರುವ 8 ಅಧೀಕ್ಷಕರ ಹುದ್ದೆಗಳ ಪೈಕಿ 1 ಹುದ್ದೆ.

ಈ) ಸಾರ್ವಜನಿಕ ಶಿಕ್ಷಣ ಇಲಾಖೆಯ ವಿಭಾಗೀಯ ಸಹ ನಿರ್ದೇಶಕರ ಕಛೇರಿಗಳಲ್ಲಿ ಇರುವ ಒಟ್ಟು 69 ಪ್ರಥಮ ದರ್ಜೆ ಸಹಾಯಕರ ಹುದ್ದೆಗಳ ಪೈಕಿ 2 ಹುದ್ದೆಗಳು.

ಉ) ಸಾರ್ವಜನಿಕ ಶಿಕ್ಷಣ ಇಲಾಖೆಯ ವಿಭಾಗೀಯ ಸಹ ನಿರ್ದೇಶಕರ ಕಛೇರಿಗಳಲ್ಲಿ ಇರುವ ಎರಡನೇ ದರ್ಜೆ ಸಹಾಯಕ ಹುದ್ದೆಗಳ ಪೈಕಿ 1 ಹುದ್ದೆ.

ಆರ್ಥಿಕ ಇಲಾಖೆಯ ಸಹಮತಿಯನ್ನು ಅ.ಟಿ. ಸಂಖ್ಯೆ: ಆಇ 2 ವೆಚ್ಚ-8/2005 ದಿನಾಂಕ: 12.9.2005 ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ಪಿ.ಆರ್. 1427
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## INFRASTRUCTURE DEVELOPMENT SECRETARIAT

**Subject:** Construction of RoBs/RuBs in Karnataka - Countersigning the GAD-reg.

**Read:**
1. G.O.No. IDD 26 NSW 2003, dated: 31.03.2003.
2. G.O.No. IDD 13 NSW 2001, dated: 26.07.2003.
3. G.O.No. IDD 22 NSW 2002, dated: 14.08.2003.
4. Proceedings of the meeting of Steering Committee for construction of RoBs/RuBs in Karnataka held on 5.9.2003.
5. Letter No.W.352/CN/BNC/RoB/LC.74/MYA dated:29.8.2005 of Dy. Chief Engineer/ P&D/Construction O/o CAO (Construction) SWR, Bangalore.

**PREAMBLE:**

In the G.O. read at (1) above, the State Government had sanctioned the new plan scheme for construction of the RoBs/RuBs in the State and also released Rs.5.00 Crores towards this. The details of the RoBs/RuBs were indicated in the Annexure-I of the said Government Order.

2. In the Government Orders read at (2) & (3) above, Government, in partial modification of the Government Order dated: 31.03.2003, accorded sanction to include RoBs at level crossings No.73 and 74 at Mandya in the Annexure-I of the said G.O. for construction of the RuBs Subject to the guidelines / scheme set out in the said Government Order.

3. The Dy. Chief Engineer / P & D (Construction), O/o Chief Administrative Officer (Construction), SWR, Bangalore, while forwarding the detailed estimates for construction of RuB and approach road in lieu of LC No.74 at KM 95/500-600 in Mandya town near KSRTC bus stand between Yellyur and Mandya station, requested for countersigning of the detailed estimates by the Principal Secretary to Government, Infrastructure Development Department.

4. The detailed estimates prepared by the Railways are technical in nature and involve several technical aspects. The concerned officers of PWD, who are well versed with technical matters are the proper officers for this purpose and Government have decided to authorise the Chief Engineer, Communication & Buildings, (South) and Chief Engineer, Communication & Buildings, (North), Public Works Department to scrutinize, accept and countersign the detailed estimates. Hence this order.

**GOVERNMENT ORDER No. IDD 22 NSW 2002, Bangalore, Dated: 15th October 2005**

After careful examination of the matter, Government are pleased to authorise the concerned Chief Engineer, Communication & Buildings, (South), Bangalore and Chief Engineer, Communication & Buildings, (North), Dharwad, Public Works Department, to carefully scrutinize, accept and countersign the detailed estimates prepared by railways in respect of construction of RoBs/RuBs in Karnataka.

By Order and in the Name of the Governor of Karnataka,
**T.B. RENUKAPRASAD**
P.R. 1421
Under Secretary to Government,
Infrastructure Development Department

**Subject:** Release of funds for Sholapur-Gadag Gauge Conversion Project-reg.

**Read:**
1) G.O.No. IDD 1 NSW 2003, dated: 03.03.2003.
2) G.O.No. IDD 1 NSW 2003, dated: 29.03.2003.

3) G.O.No. IDD 40 NSW 2003, dated: 16.09.2003.
4) G.O.No. IDD 95 NSW 2003, dated: 22.01.2004.
5) G.O.No. IDD 42 NSW 2004, dated: 16.06.2004.
6) Note No. IDD 114 IDM 2004, dated: 30.12.2004.
7) G.O.No. FD 45 BRS 2005, dated: 28.1.2005.
8) G.O.No. IDD 21 NSW 2005, dated: 22.02.2005
9) G.O.No. FD 271(B) BRS 2005, dated: 26.3.2005
10) G.O.No. IDD 21 NSW 2005, dated: 22.02.2005.
11) G.O.No. IDD 21 NSW 2005, dated: 29.03.2005.
12) Letter No. W.193/BNC/GDG-SURM/Vol.I dated: 07.07.2005 from Chief Engineer (Con), South Western Railway, Bangalore.
13) G.O.No. IDD 42 NSW 2004 (P) dated: 22.07.2005.
14) Proceedings of the meeting held under the Chairmanship of Chief Secretary to Government of Karnataka on 18.08.2005.
15) G.O.No. FD 336 BRS dated: 7.10.2005.

**PREAMBLE:**

In the Government Orders read at Sl.No. (1) to (13) above, the Government of Karnataka have released Rs.52,70,00,000 (Rupees Fifty Two Crores and Seventy Lakhs only) so far towards its matching contribution of 50% of the cost of construction of Sholapur-Gadag gauge conversion project. The Chief Engineer (Con), South Western Railway, Bangalore, in his letter read at Sl.No.(12) above, has requested further release of funds to achieve the physical progress of the said project. In the meeting held on 18.08.2005 under the chairmanship of Chief Secretary to Government of Karnataka, it was decided to disburse the entire balance of Government of Karnataka's part of the sharable cost of Rs.36.66 crores for this project within this financial year (2005-06).

2. During the current year, a balance budget allocation for this project of Rs.1.30 crores is available. On the request of the IDD, the Finance Department in its order dated 7.10.2005 read at Sl.No.(15) above, has accorded sanction for re-appropriation of a sum of Rs.15,00,00,000 (Rupees Fifteen crores only) from the head of account "5465-01-190-3-03-211-Hassan Mangalore Rail Development Corporation (HMRDC)-Investment", Hence the following order.

**GOVERNMENT ORDER No. IDD 42 NSW 2004(P), Bangalore, Dated: 15th October 2005**

After careful examination of the above, Government sanction is accorded for release of Rs.16,30,00,000 (Rupees Sixteen Crores Thirty Lakhs only) towards the State Government's share of the cost of 50% for Sholapur-Gadag gauge conversion project by the following means:

i) Release of Rs.1,30,00,000 (Rupees One Crore Thirty Lakhs only) out of the balance allocation for this project from the head of account "5465-01-190-3-03-211-Gadag-Sholapur gauge conversion project-Investment (Plan)" and
ii) Rs.15,00,00,000 (Rupees Fifteen crores only) reappropriated as per the Finance Department's G.O. No.FD 336 BRS 2005, dated: 7.10.2005 from the head of account "5465-01-190-3-03-211-Investment in HMRDC (Plan)" 2005-06.

2. The Chief Finance Officer of iDeCK is authorized to draw the amount through a payee's receipt duly countersigned by the Under Secretary to Government, Infrastructure Development Department and iDeCK shall in turn deposit the same with the Financial Adviser and Chief Accounts Officer, (Construction), South Western Railway, Bangalore.

3. The Chief Engineer, (Construction), South Western Railway, shall arrange to furnish monthly expenditure statement to the Infrastructure Development Department by the 5th of the succeeding month.

4. This order issues with the concurrence of Finance Department vide its U.O. Note No.FD 1361 Exp.I/2005 dated: 6.10.2005 and G.O.No. FD 336 BRS 2005, dated: 7.10.2005.

By Order and in the Name of the Governor of Karnataka,

**T.B. RENUKAPRASAD**

P.R. 1426

Under Secretary to Government,
Infrastructure Development Department.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:-** ಭದ್ರಾ ಯೋಜನಾ ನೀರಾವರಿ ಸಲಹಾ ಸಮಿತಿಗೆ ಹೊಸದಾಗಿ ವಿಶೇಷ ಅಧಿಕಾರೇತರ ಆಹ್ವಾನಿತರನ್ನು ಸೇರ್ಪಡೆ ಮಾಡುವ ಬಗ್ಗೆ

**ಓದಲಾಗಿದೆ:-** ೧. ಸರ್ಕಾರದ ಆದೇಶ ಸಂಖ್ಯೆ: ಜಸಂಇ ೧೨೩ ಎಂಎಂಬಿ ೦೪, ದಿನಾಂಕ ೨೨-೦೭-೦೪

೨. ಮುಖ್ಯ ಇಂಜಿನಿಯರ್, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ರವರ ಪತ್ರ ಸಂಖ್ಯೆ:ಮುಇಂ ಕನೀನಿನಿ/ತುಂ.ಮೇ.ಯೋ.ವ/ತಾಂಸ-೨/ಯೋಶಾ-೧೨/೦೪-೦೫ ದಿನಾಂಕ ೦೭-೧೦-೦೪.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ಸರ್ಕಾರದ ಆದೇಶ ಸಂಖ್ಯೆ: ಜಸಂಇ 123 ಎಂಎಂಬಿ 2004, ದಿನಾಂಕ 22-07-04 ರಲ್ಲಿ ಭದ್ರಾ ಯೋಜನಾ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಪತ್ರದಲ್ಲಿ ಮುಖ್ಯ ಇಂಜಿನಿಯರ್, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ ರವರು ಭದ್ರಾ ನೀರಾವರಿ ಸಲಹಾ ಸಮಿತಿಗೆ ಹೊಸದಾಗಿ ಕೆಲವು ಗಣ್ಯರನ್ನು ಅಧಿಕಾರೇತರ ಆಹ್ವಾನಿತರನ್ನಾಗಿ ಸೇರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 123 ಎಂಎಂಬಿ 2004, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್ 2005.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಭದ್ರಾ ಯೋಜನಾ ನೀರಾವರಿ ಸಲಹಾ ಸಮಿತಿಯನ್ನು ದಿನಾಂಕ 22-7-04ರ ಆದೇಶದಲ್ಲಿ ರಚಿಸಿರುವುದನ್ನು ಮಾರ್ಪಡಿಸಿ ಈ ಕೆಳಕಂಡ ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ಅಧಿಕಾರೇತರ ಆಹ್ವಾನಿತರು ಹಾಗೂ ವಿಶೇಷ ಆಹ್ವಾನಿತರನ್ನು ಒಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಆದೇಶ ಹೊರಡಿಸಿದೆ.

ಅಧ್ಯಕ್ಷರು, ಭದ್ರಾ ಕಾಡಾ, ಮಲವಗೊಪ್ಪ, ಶಿವಮೊಗ್ಗ — ಅಧ್ಯಕ್ಷರು

**ಅಧಿಕಾರಿ ಸದಸ್ಯರು:-**

1) ಆಡಳಿತಾಧಿಕಾರಿಗಳು, ಭದ್ರಾ ಕಾಡಾ, ಶಿವಮೊಗ್ಗ. — ಸದಸ್ಯರು
2) ಮುಖ್ಯ ಇಂಜಿನಿಯರ್, ತುಂಗಾ ಮೇಲ್ದಂಡೆ ಯೋಜನಾ ವಲಯ, ಶಿವಮೊಗ್ಗ — ಸದಸ್ಯರು
3) ಅಧೀಕ್ಷಕ ಅಭಿಯಂತರರು, ಭದ್ರಾ ಯೋಜನಾ ವೃತ್ತ, ಬಿ.ಆರ್. ಪ್ರಾಜೆಕ್ಟ್ — ಸದಸ್ಯ-ಕಾರ್ಯದರ್ಶಿ
4) ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ — ಸದಸ್ಯರು
5) ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು — ಸದಸ್ಯರು
6) ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ದಾವಣಗೆರೆ — ಸದಸ್ಯರು
7) ಜಂಟಿ ಕೃಷಿ ನಿರ್ದೇಶಕರು, ಶಿವಮೊಗ್ಗ ವಿಭಾಗ, ಶಿವಮೊಗ್ಗ — ಸದಸ್ಯರು

**ಅಧಿಕಾರೇತರ ಸದಸ್ಯರು:-**

1) ಡಾ: ವೈ.ನಾಗಪ್ಪ,ಸಮಾಜ ಕಲ್ಯಾಣ ಸಚಿವರು
2) ಶ್ರೀ. ಕೆ.ಎಸ್. ಈಶ್ವರಪ್ಪ ಶಾಸಕರು, ಶಿವಮೊಗ್ಗ — ಸದಸ್ಯರು
3) ಶ್ರೀ ಬಿ.ಕೆ. ಸಂಗಮೇಶ್ವರ್, ಶಾಸಕರು, ಭದ್ರಾವತಿ — ಸದಸ್ಯರು
4) ಶ್ರೀ. ಟಿ.ಹೆಚ್. ಶಿವಶಂಕರಪ್ಪ, ಶಾಸಕರು, ತರೀಕೆರೆ — ಸದಸ್ಯರು
5) ಶ್ರೀ ಮಹಿಮಾ ಜೆ.ಪಟೇಲ್, ಶಾಸಕರು, ಚನ್ನಗಿರಿ — ಸದಸ್ಯರು
6) ಶ್ರೀ ಎಸ್.ಎ. ರವೀಂದ್ರನಾಥ್, ಶಾಸಕರು, ಮಾಯಕೊಂಡ — ಸದಸ್ಯರು
7) ಶ್ರೀ ಎಂ.ಪಿ. ರೇಣುಕಾಚಾರ್ಯ, ಶಾಸಕರು, ಹೊನ್ನಾಳಿ — ಸದಸ್ಯರು
8) ಶ್ರೀ ಜಿ. ಬಸವಣ್ಣೆಪ್ಪ ಶಾಸಕರು, ಹೊಳೆಹೊನ್ನೂರು. — ಸದಸ್ಯರು

**ವಿಶೇಷ ಆಹ್ವಾನಿತ ಅಧಿಕಾರಿಗಳು:-**

1) ಭೂ ಅಭಿವೃದ್ಧಿ ಅಧಿಕಾರಿ (ತಾಂತ್ರಿಕ). ಭದ್ರಾ ಕಾಡಾ. ಶಿವಮೊಗ್ಗ.
2) ಭೂ ಅಭಿವೃದ್ಧಿ ಅಧಿಕಾರಿ (ಕೃಷಿ), ಭದ್ರಾ ಕಾಡಾ, ಶಿವಮೊಗ್ಗ.
3) ಸೀನಿಯರ್, ಆಗ್ರೋನಾಮಿಸ್ಟ್ ಅಗ್ರಿಕಲ್ಚರಲ್ ಯೂನಿವರ್ಸಿಟಿ, ಕತ್ತಲಗೆರೆ.
4) ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ.
5) ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ.
6) ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು.

**ವಿಶೇಷ ಅಧಿಕಾರೇತರ ಆಹ್ವಾನಿತರು:-**

1) ಶ್ರೀ ಎಸ್. ಬಂಗಾರಪ್ಪ ಲೋಕಸಭಾ ಸದಸ್ಯರು, ಶಿವಮೊಗ್ಗ.

2) ಶ್ರೀ ಡಿ.ಸಿ. ಶ್ರೀಕಂಠಪ್ಪ, ಲೋಕಸಭಾ ಸದಸ್ಯರು, ಚಿಕ್ಕಮಗಳೂರು.
3) ಶ್ರೀ ಜಿ.ಎಂ. ಸಿದ್ದೇಶ್ವರ್, ಲೋಕಸಭಾ ಸದಸ್ಯರು, ದಾವಣಗೆರೆ
4) ಶ್ರೀ ಶಾಮನೂರು ಶಿವಶಂಕರಪ್ಪ, ಶಾಸಕರು, ದಾವಣಗೆರೆ
5) ಶ್ರೀ ಹೆಚ್. ಹಾಲಪ್ಪ, ಶಾಸಕರು, ಹೊಸನಗರ.
6) ಶ್ರೀ ಪಿ.ಟಿ. ಪರಮೇಶ್ವರ ನಾಯ್ಕ, ಶಾಸಕರು, ಹರಪನಹಳ್ಳಿ
7) ಶ್ರೀ ಕಾಗೋಡು ತಿಮ್ಮಪ್ಪ, ಮಾಜಿ ಸಚಿವರು, ಸಾಗರ, ಶಿವಮೊಗ್ಗ ಜಿಲ್ಲೆ.
8) ಶ್ರೀ ಕೋಣನ ತಲೆ ಬೀರಪ್ಪ ಭಾನುವಳ್ಳಿ ಅಂಚೆ, ಭಾನುವಳ್ಳಿ ಹರಿಹರ ತಾಲ್ಲೂಕು.
9) ಶ್ರೀ ಹೆಚ್. ಬಸವರಾಜಪ್ಪ, ಎಲೆಬೇತೂರು, ದಾವಣಗೆರೆ ತಾಲ್ಲೂಕು.
10) ಶ್ರೀ ಬಿ.ಹೆಚ್. ಹಾಲಪ್ಪ, ಬಿನ್ ಹಾಲಪ್ಪ, ತ್ಯಾವಣಿಗಿ ಗ್ರಾಮ, ಚನ್ನಗಿರಿ ತಾಲ್ಲೂಕು.
11) ಶ್ರೀ ಎಲ್.ಎಂ. ಸೀನೋಜಿರಾವ್ ಬಿನ್ ಮಂಜೋಜಿರಾವ್, ಟಿ.ಎಂ. ರೋಡ್, ಲಕ್ಕವಳ್ಳಿ.
12) ಶ್ರೀ ಅವರಗೆರೆ ಕೆಂಚಪ್ಪ ಅವರಗೆರೆ ಗ್ರಾಮ, ದಾವಣಗೆರೆ ತಾಲ್ಲೂಕು ಮತ್ತು ಜಿಲ್ಲೆ.
13) ಶ್ರೀ ಇ.ರಾಮಚಂದ್ರಪ್ಪ ಬಿನ್ ಆಂಜಿನಪ್ಪ, ಶಿಂಗ್ರಿಹಳ್ಳಿ ಗ್ರಾಮ, ಹರಪನಹಳ್ಳಿ.
14) ಶ್ರೀ ಕೆ.ಟಿ. ಗಂಗಾಧರ,
ರಾಜ್ಯ ರೈತ ಸಂಘದ ಕಾರ್ಯದರ್ಶಿಗಳು, ವಿದ್ಯಾನಗರ, ಶಿವಮೊಗ್ಗ
15) ಶ್ರೀ ಹೆಚ್.ಆರ್. ಬಸವರಾಜ್,
ರೈತಸಂಘದ ರಾಜ್ಯ ಪ್ರಧಾನ ಕಾರ್ಯದರ್ಶಿಗಳು,
ಹನುಮಂತಾಪುರ ಗ್ರಾಮ -ಭದ್ರಾವತಿ ತಾಲ್ಲೂಕು ಶಿವಮೊಗ್ಗ ಜಿಲ್ಲೆ.
16) ಶ್ರೀ ನಾಗರಾಜಪ್ಪ,
ಹೊಳೆಹೊನ್ನೂರು ಕ್ಷೇತ್ರ, ಕೂಡ್ಲಿಗೆರೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ
17) ಶ್ರೀ ಕೆ.ಟಿ. ಸತ್ಯನಾರಾಯಣ
ಕಂಚಿನಕಟ್ಟೆ, ಶಿವಮೊಗ್ಗ.
18) ಶ್ರೀ ಜೆ. ರಘುನಾಥ್, ಕಾರ್ಯದರ್ಶಿ, ವಿದ್ಯಾನಗರ, ಶಿವಮೊಗ್ಗ.
19) ಶ್ರೀ ವೈ.ಜಿ. ಮಲ್ಲಿಕಾರ್ಜುನ
ಪ್ರಧಾನ ಕಾರ್ಯದರ್ಶಿ, ಭದ್ರಾ ಎಡದಂಡೆ ನಾಲಾ, ಅಚ್ಚುಕಟ್ಟುದಾರರ ಹಿತರಕ್ಷಣಾ ಸಮಿತಿ
20) ಶ್ರೀ. ಡಿ.ವಾಸುದೇವ್ ಬಿನ್. ಎಸ್.ಟಿ. ಧರ್ಮಪ್ಪ
ಶೆಟ್ಟಿಹಳ್ಳಿ, ಶಿವಮೊಗ್ಗ ತಾಲ್ಲೂಕು, (ಹೊಳಲೂರು ಹೋಬಳಿ)
21) ಶ್ರೀ. ಬಿ.ಆರ್. ಗೋಪಾಲಗಿರಿ ಬಿನ್ ರತ್ನಗಿರಿ, ಬಾಬಳ್ಳಿ, ಭದ್ರಾವತಿ ತಾಲ್ಲೂಕು
22) ಶ್ರೀ ಹೆಚ್. ಕೃಷ್ಣಪ್ಪ
ಮಾಜಿ ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ,
ಸಮಿತಿ, ಭದ್ರಾವತಿ, ಅತ್ತಿಗುಂದ ವಾಸ, ಅರಳಿಹಳ್ಳಿ ಅಂಚೆ ಭದ್ರಾವತಿ ತಾಲ್ಲೂಕು.

ಅಧಿಕಾರೇತರ ಸದಸ್ಯರ ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್.ಡಿ.೨ ಎಸ್ಆರ್ಎ ೨೦೦೦, ದಿನಾಂಕ ೦೩-೦೨-೨೦೦೧ರ ಅನ್ವಯ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಶಿವಶಂಕರ್**

ಪಿ.ಆರ್. 1434 ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ-೧)

ಜಲ ಸಂಪನ್ಮೂಲ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಎ.ಶಂಕರಪ್ಪ, ಹಿಂದಿನ ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ದೊಡ್ಡೇರಿ, ಬೆಂಗಳೂರು ದಕ್ಷಿಣ ಜಿಲ್ಲೆ, ಹಾಲಿ ಹಿರಿಯ ಉಪನ್ಯಾಸಕರು, ಡಯಟ್, ಯರಮರಸ್, ಇವರ ಮೇಲಿನ ಶಿಸ್ತು ಕ್ರಮದಲ್ಲಿ ಅಂತಿಮ ಆದೇಶ.

**ಓದಲಾಗಿದೆ:** ೧. ಸಾ.ಶಿ.ಇ. ಆಯುಕ್ತರ ದಿ:೧೭.೪.೨೦೦೦ರ ಕಾರಣ ಕೇಳುವ ನೋಟೀಸ್ ಸಂ:ಸಿ೨(೬) ಪಅದೂ ೦೮/೯೭-೯೮.

೨. ದಿ:೨೦.೦೯.೨೦೦೦ರ ಸಾಶಿಇ ಆಯುಕ್ತರ ಸಂ:ಸಿ೨(೬) ಪಅದೂ ವಿಚಾರಣಾಧಿಕಾರಿಗಳ ದಿ:೨೩.೦೪.೨೦೦೧ರ ವರದಿ

೩. ಸಾ.ಶಿ.ಇ ಆಯುಕ್ತರ ದಿ:೨೨.೦೯.೨೦೦೩ರ ಪತ್ರ ಸಂಖ್ಯೆ; ಸಂ:ಸಿ೨(೬) ಪಅದೂ ೦೮/೯೭-೯೮

೪. ದಿ:೦೩.೦೬.೨೦೦೪ರ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ ಇಡಿ೯೦೩ ಡಿಜಿಡಿ ೨೦೦೩.

೫. ಶ್ರೀ ಎ. ಶಂಕರಪ್ಪನವರ ದಿ:೨೮.೧೨.೨೦೦೪ರ ಪ್ರತಿರಕ್ಷಣಾ ಹೇಳಿಕೆ.

೬. ಕರ್ನಾಟಕ ಲೋಕಸೇವಾ ಆಯೋಗದ ದಿ:೭.೪.೨೦೦೫ರ ಪತ್ರ ಸಂ:ಪಿಎಸ್‌ಸಿ ೧೭೪ ಸಿಎಸ್‌ಎಸ್ ೨೦೦೪.

ಶ್ರೀ ಎ.ಶಂಕರಪ್ಪ, ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಯರಮರಸ್, ಇವರು ಹಿಂದೆ ಬೆಂಗಳೂರು ದಕ್ಷಿಣ ಜಿಲ್ಲೆ, ದೊಡ್ಡೇರಿ, ಸರ್ಕಾರಿ ಪ್ರೌಢಶಾಲೆಯ ಮುಖ್ಯ ಶಿಕ್ಷಕರಾಗಿದ್ದ ಅವಧಿಯಲ್ಲಿ ಒಟ್ಟು 204 ದಿನ ಕರ್ತವ್ಯಕ್ಕೆ ಗೈರು ಹಾಜರಾಗಿರುವುದು, ವಿದ್ಯಾರ್ಥಿಗಳಿಂದ ಹೆಚ್ಚುವರಿ ಶುಲ್ಕವನ್ನು ವಸೂಲಿ ಮಾಡಿ ದುರುಪಯೋಗಪಡಿಸಿಕೊಂಡಿರುವ ಹಾಗೂ ಇತರೆ ಹಣಕಾಸಿನ ಅವ್ಯವಹಾರಗಳ ಆರೋಪಗಳ ಮೇಲೆ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957 ರ ನಿಯಮ 11 ರ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ 1ರ ದಿನಾಂಕ:17.04.2000ರ ಕಾರಣ ಕೇಳುವ ನೋಟೀಸ್ ಮೂಲಕ ಆರೋಪಣಾ ಪಟ್ಟಿಯನ್ನು ಜಾರಿಮಾಡಿ ಅವರ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಿದ್ದರು. ಸದರಿ ನೋಟೀಸಿಗೆ ಶ್ರೀ ಎ. ಶಂಕರಪ್ಪನವರು ತನ್ನ ಮೇಲಿನ ಆರೋಪಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು 3 ತಿಂಗಳು ಕಳೆದರು ಸಲ್ಲಿಸದಿರುವ ಕಾರಣ ಅವರ ಮೇಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ವಿಚಾರಣೆ ನಡೆಸಲು ತೀರ್ಮಾನಿಸಿ ಸರ್ಕಾರವು ಕ್ರಮಸಂಖ್ಯೆ 2ರ ದಿನಾಂಕ: 20.9.2000ರ ಜ್ಞಾಪನದಲ್ಲಿ ಶ್ರೀಮತಿ ಮೀರಾದೇವಿ ಪ್ರಾಂಶುಪಾಲರು, ಡಯಟ್, ಬೆಂಗಳೂರು ನಗರ ಜಿಲ್ಲೆ, ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿದ್ದರು.

2. ವಿಚಾರಣಾಧಿಕಾರಿಗಳು ನಿಯಮಗಳ ಪ್ರಕಾರ ವಿಚಾರಣೆ ನಡೆಸಿ ದಿನಾಂಕ:23.04.2001ರಂದು ಸಲ್ಲಿಸಿರುವ ವರದಿಯಲ್ಲಿ ಶ್ರೀ. ಎ. ಶಂಕರಪ್ಪ ಇವರ ಮೇಲಿನ ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ, ಸದರಿಯವರಿಂದ ದುರುಪಯೋಗವಾಗಿರುವ ರೂ.30222ಗಳನ್ನು ವಸೂಲಿ ಮಾಡುವುದರೊಂದಿಗೆ ಅವರನ್ನು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ8(viii)ರ ಮೇರೆಗೆ ಸೇವೆಯಿಂದ ವಜಾಮಾಡುವ ದಂಡನೆಯನ್ನು ವಿಧಿಸುವಂತೆ, ಸಾ.ಶಿ.ಆಯುಕ್ತರು ದಿನಾಂಕ:20.10.2003ರ ಪತ್ರದಲ್ಲಿ ಶಿಫಾರಸ್ಸು ಮಾಡಿದ್ದರು.

3. ಸರ್ಕಾರವು ಶಿಸ್ತುಪ್ರಾಧಿಕಾರಿಯಾಗಿ ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯನ್ನು ಇಲಾಖಾ ವಿಚಾರಣೆಯ ದಾಖಲೆಗಳೊಂದಿಗೆ ಪರಿಶೀಲಿಸಿ ವಿಚಾರಣೆಯಲ್ಲಿ ಸಾಬೀತಾದ ಆರೋಪಗಳ ಬಗ್ಗೆ ಆಪಾದಿತ ಅಧಿಕಾರಿಗೆ ದಿ:3.6.2004 ರಂದು ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ, ಅವರಿಗೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಶ್ರೀ ಎ.ಶಂಕರಪ್ಪನವರು ದಿನಾಂಕ:28.12.2004 ರಂದು ಸಲ್ಲಿಸಿದ ಪ್ರತಿರಕ್ಷಣಾ ಹೇಳಿಕೆಯಲ್ಲಿ ತನ್ನ ಮೇಲಿನ ಆರೋಪಗಳನ್ನು ಒಪ್ಪಿಕೊಂಡು ದುರುಪಯೋಗವಾದ ಹಣವನ್ನು ತುಂಬುವೆನೆಂದು ವಿಚಾರಣಾ ವೇಳೆಯಲ್ಲಿ ಒಪ್ಪಿ ಬರೆದುಕೊಟ್ಟಿರುವುದಾಗಿ ತಿಳಿಸಿರುತ್ತಾರೆ.

4. ಇದರ ಹೇಳಿಕೆಯನ್ನು ಸಂಬಂಧಿಸಿದ ದಾಖಲಾತಿಗಳೊಂದಿಗೆ ಪರಿಶೀಲಿಸಿ ವಿಚಾರಣೆಯಲ್ಲಿ ಸಾಬೀತಾದ ಆರೋಪಗಳಿಗೆ ಅವರನ್ನು ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಹಾಗೂ ದುರುಪಯೋಗಪಡಿಸಿಕೊಂಡ ಹಣವನ್ನು ವಸೂಲಿ ಮಾಡಲು ನಿರ್ಣಯಿಸಿದೆ. ಕೆಸಿಎಸ್(ಸಿಸಿಎ) ನಿಯಮಾವಳಿಗಳು 1957ರ ನಿಯಮ 8(vii)ರ ಅಡಿ ಶ್ರೀಯುತರನ್ನು ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಹಾಗೂ ದುರುಪಯೋಗ ಮಾಡಿರುವ ಮೊತ್ತದ ವಸೂಲಿ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿ, ಅವರು ದಿ:7.4.2005 ರ ಪತ್ರದಲ್ಲಿ ಅವರನ್ನು ಸೇವೆಯಿಂದ ತೆಗೆದು ಹಾಕಬೇಕೆನ್ನುವ ಪ್ರಸ್ತಾವನೆಗೆ ಸಹಮತಿಯನ್ನು ಸೂಚಿಸುತ್ತಾ,ದುರುಯೋಗಪಡಿಸಿಕೊಂಡಿರುವ ಹಣ ರೂ.30,222/-ಗಳನ್ನು ಶೇ. 8 ರಂತೆ ಬಡ್ಡಿ ಸಮೇತ ವಸೂಲಿ ಮಾಡಲು ಅಭಿಪ್ರಾಯಪಟ್ಟಿರುತ್ತದೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದ ನಂತರ ಕರ್ನಾಟಕ ಲೋಕಸೇವಾ ಆಯೋಗವು ಒಪ್ಪಿರುವಂತೆ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 190 ಡಿಜಿಡಿ 2003 ಬೆಂಗಳೂರು, ದಿ:10ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎ. ಶಂಕರಪ್ಪ ಹಿರಿಯ ಉಪನ್ಯಾಸಕರು, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ, ಯರಮರಸ್, ರಾಯಚೂರು, ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕೆಸಿಎಸ್(ಸಿಸಿಎ) ನಿಯಮಾವಳಿಗಳು, 1957ರ ನಿಯಮ 8(vii)ರ ಅನ್ವಯ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಲು ಹಾಗೂ ಅವರು ದುರುಪಯೋಗ ಪಡಿಸಿಕೊಂಡಿರುವ ಹಣ ರೂ.30,222/-(ಮೂವತ್ತು ಸಾವಿರದ ಎರಡುನೂರ ಇಪ್ಪತ್ತೆರಡು)ಗಳನ್ನು ಶೇ.8 ರಂತೆ ಬಡ್ಡಿಸಮೇತ ಅವರಿಂದ ವಸೂಲಿ ಮಾಡಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1435

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:-** ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ಮತ್ತು ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:-**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 128 ಎಸ್ಇಎನ್ 2001 ದಿನಾಂಕ: 30.1.2004 ಮತ್ತು 31.1.2004.
2. ಶ್ರೀ ಎಂ.ಎಸ್. ನಟರಾಜಮೂರ್ತಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 18.11.2004.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 128 ಎಸ್ಇಎನ್ 2001 ದಿನಾಂಕ 29.11.2004.
4. ಶ್ರೀ ಎಂ.ಎಸ್. ನಟರಾಜಮೂರ್ತಿ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 7.4.2005.

**ಪ್ರಸ್ತಾವನೆ:**

ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಲಿ, ಧಾರವಾಡ ಇಲ್ಲಿ ವಿಶೇಷ ಭೂಸ್ವಾಧೀನ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ರಾಜ್ಯ ಉಚ್ಚನ್ಯಾಯಾಲಯದ ಆದೇಶದಂತೆ ಗ್ರಾಸಿಮ್ ಇಂಡಸ್ಟ್ರೀಸ್, ಕುಮಾರಪಟ್ಟಣಂ ಅವರಿಗೆ ಸೊಲೇಷಿಯಂ ನೀಡಿದ್ದರೂ ಸಹ ಇದೇ ಪ್ರಕರಣದಲ್ಲಿ ಗ್ರಾಸಿಮ್ ಇಂಡಸ್ಟ್ರೀಸ್ ನವರು ಸಲ್ಲಿಸಿದ ಮೇಲ್ಮನವಿಯನ್ನು ವಜಾ ಮಾಡಿರುವ ವಿಷಯವನ್ನು ಸರ್ಕಾರಿ ವಕೀಲರ ಮೂಲಕ ರಾಜ್ಯ ಉಚ್ಚನ್ಯಾಯಾಲಯದ ಗಮನಕ್ಕೆ ತರದೆ ನ್ಯಾಯಾಲಯದ ತೀವ್ರ ಆಕ್ಷೇಪಣೆಗೆ ಗುರಿಯಾಗುವ ಸಂದರ್ಭ ಸೃಷ್ಟಿಸಿದ ಆರೋಪಕ್ಕಾಗಿ ಶ್ರೀ ಎ.ಎ.ಇಳಕಲ್, ಕೆ.ಎ.ಎಸ್.(ಹಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ಬಾಗೇಪಲ್ಲಿ ವೀರಪ್ಪ, ನಿವೃತ್ತ ಕೆ.ಎ.ಎಸ್.ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 30.1.2004 ಹಾಗೂ 31.1.2004 ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಶನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2)ರಲ್ಲಿ ಓದಲಾದ ದಿನಾಂಕ 18.11.04ರ ವಿಚಾರಣಾ ವರದಿಯನ್ನು ಸಲ್ಲಿಸಿದ್ದರ ಮೇರೆಗೆ ಅವರಿಗೆ ರೂ.5,000/-ಗಳ ಗೌರವ ಧನ ಹಾಗೂ ರೂ.1,000/-ಗಳ ವಾಹನಭತ್ಯೆ ಮಂಜೂರು ಮಾಡುವಂತೆ ಸರ್ಕಾರವು ಮೇಲೆ (3)ರಲ್ಲಿ ಓದಲಾದ ದಿನಾಂಕ 29.11.2004ರಂದು ಆದೇಶಿಸಿದೆ. ಮೇಲೆ (4)ರಲ್ಲಿ ಓದಲಾದ ದಿನಾಂಕ 7.4.2005ರಂದು ಮನವಿ ಸಲ್ಲಿಸಿ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಸೇವೆಯಲ್ಲಿರುವ ಒಬ್ಬರು ಅಧಿಕಾರಿಗೆ ಒಂದು ವಿಚಾರಣಾ ವರದಿ ಹಾಗೂ ಸೇವೆಯಿಂದ ನಿವೃತ್ತರಾಗಿರುವ ಮತ್ತೊಬ್ಬ ಅಧಿಕಾರಿಗೆ ಮತ್ತೊಂದು ವಿಚಾರಣಾ ವರದಿಯನ್ನು ಹೀಗೆ ಈ ಪ್ರಕರಣದಲ್ಲಿ ಪ್ರತ್ಯೇಕವಾಗಿ ಎರಡು ವಿಚಾರಣಾ ವರದಿಗಳನ್ನು ನೀಡಿರುವುದರಿಂದ ಎರಡೂ ವಿಚಾರಣೆಗಳಿಗೂ ಪ್ರತ್ಯೇಕವಾಗಿ ಸಂಭಾವನೆ ನೀಡುವಂತೆ ವಿಚಾರಣಾಧಿಕಾರಿಗಳು ಕೋರಿರುವುದನ್ನು ಪರಿಶೀಲಿಸಲಾಗಿದೆ. ಈ ಪ್ರಕರಣದಲ್ಲಿನ ಸೇವೆಯಲ್ಲಿರುವ ಹಾಗೂ ಸೇವೆಯಿಂದ ನಿವೃತ್ತರಾಗಿರುವ ಎರಡು ಅಧಿಕಾರಿಗಳ ಮೇಲಿನ ಶಿಸ್ತು ಪ್ರಕರಣವು ಒಂದೇ ಆಗಿದ್ದು, ಕೇವಲ ಅವರ ವಿರುದ್ಧ ವಿವಿಧ ನಿಯಮಗಳಡಿ ವಿಚಾರಣೆ ಹೂಡಲಾಗಿರುತ್ತದೆ. ಆರೋಪಗಳು ಒಂದೇ ತೆರನಾಗಿದ್ದು, ವಿಚಾರಣಾ ಸಮಯದಲ್ಲಿ ಸಾಕ್ಷಿದಾರರು, ಸಾಕ್ಷಿಗಳು ಮತ್ತು ಆರೋಪಗಳನ್ನು ಒಟ್ಟಾಗಿ ಪರಿಶೀಲಿಸಿರುವುದರಿಂದ ಎರಡು ವಿಚಾರಣಾ ವರದಿಗಳನ್ನು ಪ್ರತ್ಯೇಕವಾಗಿ ನೀಡಿದಾಗ್ಯೂ ಸಹ ಎರಡು ಪ್ರತ್ಯೇಕ ವಿಚಾರಣೆ ಎಂದು ಪರಿಗಣಿಸಲು ಆಗುವುದಿಲ್ಲ ಹಾಗೂ ಪ್ರತ್ಯೇಕವಾಗಿ ಸಂಭಾವನೆಯನ್ನು ನೀಡಲು ಬರುವುದಿಲ್ಲ. ಆದಾಗ್ಯೂ ಎರಡು ವಿಚಾರಣಾ ವರದಿಗಳನ್ನು ನೀಡಿದ ಕಾರಣದ ಮೇರೆಗೆ ಹೆಚ್ಚುವರಿಯಾಗಿ ರೂ.1,000/-ಗಳನ್ನು ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 128 ಎಸ್ಇಎನ್ 2001 ಬೆಂಗಳೂರು, ದಿನಾಂಕ 14ನೇ ಅಕ್ಟೋಬರ್ 2005**

ಸರ್ಕಾರವು ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರಿಗೆ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಅವರಿಗೆ ಸಮಸಂಖ್ಯೆಯ ದಿನಾಂಕ 29.11.2004ರ ಸರ್ಕಾರಿ ಆದೇಶದಲ್ಲಿ ರೂ.5,000/-ಗಳ ಸಂಭಾವನೆ ಹಾಗೂ ವಾಹನ ಭತ್ಯೆ ರೂ.1,000/-ಗಳನ್ನು ಮಂಜೂರು ಮಾಡಿರುವುದರ ಜೊತೆಗೆ ಹೆಚ್ಚುವರಿಯಾಗಿ ರೂ.1,000/-ಗಳನ್ನು (ರೂಪಾಯಿ ಒಂದು ಸಾವಿರ ಮಾತ್ರ) ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇತರೆ ಭತ್ಯೆಗಳು" ರಲ್ಲಿ ಭರಿಸುವುದು. ಈ ಆದೇಶವನ್ನು ಸಿಆಸುಇ (ಸೇವಾ ನಿಯಮಗಳು) ಅ.ಟಿ. ಸಂಖ್ಯೆ:814 ಸೇನಿವಿ 05 ದಿನಾಂಕ 2.8.2005ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1442

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:-** ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:-**
1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 63 ಎಸ್‌ಇಎನ್ 2004 ದಿನಾಂಕ: 21.02.2005.
2. ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 05.10.2005.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಸೇವೆಗಳು ಶಾಖೆಯ ಉಪ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಹಲವಾರು ಕಡತಗಳಲ್ಲಿ ಕ್ರಮ ಕೈಗೊಳ್ಳದೆ ಹಾಗೆಯೇ ತಮ್ಮ ಬಳಿ ಇಟ್ಟುಕೊಂಡು ಕರ್ತವ್ಯ ಲೋಪವೆಸಗಿ ಹಾಗೂ ಗಣಕ ಯಂತ್ರದಲ್ಲಿ ಕಡತದ ಚಲನೆ ಬಗ್ಗೆ ಅಸಂಬದ್ಧ ನಮೂದುಗಳನ್ನು ಮಾಡಿ ಬೇಜವಾಬ್ದಾರಿಯಿಂದ ವರ್ತಿಸಿರುವ ಆರೋಪಕ್ಕಾಗಿ ಶ್ರೀ ಎಂ.ಕೆ.ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 21.02.2005ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2)ರಲ್ಲಿ ಓದಲಾದ ದಿನಾಂಕ:05.10.2005ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 63 ಎಸ್‌ಇಎನ್ 04 ಬೆಂಗಳೂರು, ದಿನಾಂಕ 19ನೇ ಅಕ್ಟೋಬರ್ 2005.**

ಸರ್ಕಾರವು ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ:24-4-1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ:4-3-2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್.ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 1460

## ENERGY SECRETARIAT

**Sub:** Transfer of 7.2 M.W. Wind Power Capacity in favour of M/s Suzlon Infrastructure Limited - orders relating to.

**Read:**
1. Government Order No : DE 26 NCE 99, dated : 13.5.1999.
2. Government order No : DE 318 NCE 04, dated : 21.1.2004.
3. Government order No : EN 64 NCE 05, dated : 11.3.2005.
4. Letter No : KRED/08/ Fiza / 2005 / 1920, dated : 18.10.2005 received from the Managing Director, Karnataka Renewable Energy Development Limited, Bangalore.

**PREAMBLE** :

In the Government Orders dated : 21.12.2004 and 11.3.2005 read at (2) & (3) above, sanction has been accorded for implementation of 7.2 M.W. capacity Wind Power Project at Chitradurga District to M/s Fiza Developers and Inter Trade Pvt. Ltd.

Now, the Managing Director, Karnataka Renewable Energy Development Limited, Bangalore, in his letter dated : 18.10.2005 read at (4) above, has recommended to the Government for transfer of 7.2 M.W. Wind Power capacity in favour of M/s Suzlon Infrastructure Limited at Jogimatti area & Kasavanahalli /Holelkere Taluk, Chitradurga district, from out of the sanctioned 7.2 M.W. capacity of M/s Fiza Developers and Inter Trade Pvt. Ltd.

The proposal has been examined and pass the following order :

**Government Order No : EN 315 NCE 2005, Bangalore, Dated : 19th October 2005**

Government is pleased to accord sanction for transfer of 7.2 M.W. Wind Power capacity in favour of M/s Suzlon Infrastructure Limited, at Jogimatti area & Kasavanahalli /Holelkere taluk, Chitradurga district, from out of 7.2 M.W. capacity of M/s Fiza Developers & Inter-Trade Pvt. Limited, allotted in the Government order dated : 21.12.2004 and 11.3.2005 as detailed below :

| Sl. No. | Sanctioned Capacity | Villages | Taluk and Districts | Description of the Area |
|---|---|---|---|---|
| 1. | 4.95 MW | Jogimatti area | Chitradurga | Area : A<br>Latitude: $14^0$ 8' 46''-9' 24'' N<br>Longitude: $76^0$ 23' 28''-24' 18'' E<br>Peak : South of 1132 M<br>Peak described as open Scrub<br>Area : B<br>Latitude: $14^0$ 9' 26''-10' 24'' N<br>Longitude: $76^0$ 21' 12''-22' 8'' E<br>Peak : North-West of 1065 M |
| 2. | 2.25 MW | Kasavanahalli/ Holelkere Taluk | Chitradurga | About 1Km length ridge oriented in a North-West, South-East direction and is situated in the north of Kasavanahalli village and has a peak 1054 AMSL.<br>Latitude: $14^0$ 4' 30''-13' 5'' N<br>Longitude: $76^0$ 5' 16''-76' 6'' E |
| Total | 7.2 MW | | | |

The terms and conditions of the Government order read at (1) above shall **IPSOFACTO** applicable.

By Order and in the Name of the Governor of Karnataka.

P.R. 1468

**Suresh.B.Krishnappanavar**
Under Secretary to Government,
Energy Department.

**ಇಂಧನ ಸಚಿವಾಲಯ**

**ವಿಷಯ:–** ಮೆ: ಶ್ರೀನಿವಾಸ ಗಾಯಿತ್ರಿ ರಿಸೋರ್ಸ್ ರಿಕವರಿ ಲಿಮಿಟೆಡ್ ಕಂಪನಿಗೆ 8 ಮೆಗಾ ವ್ಯಾಟ್ ಸಾಮರ್ಥ್ಯದ ಘನ ತ್ಯಾಜ್ಯ ಆಧಾರಿತ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ:–** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್/ಡಬ್ಲ್ಯುಇ/ಎಂಎಸ್‌ಡಬ್ಲ್ಯು/ಬಿ.ಎಂ.ಪಿ/1752/ ದಿನಾಂಕ : 21.9.2005.
2. ದಿನಾಂಕ : 30.9.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಮೆ:: ಶ್ರೀನಿವಾಸ ಗಾಯಿತ್ರಿ ರಿಸೋರ್ಸ್ ರಿಕವರಿ ಲಿಮಿಟೆಡ್ ಕಂಪನಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬೆಂಗಳೂರು ಪೂರ್ವ ತಾಲ್ಲೂಕಿನ ಮಂಡೂರು ಗ್ರಾಮದಲ್ಲಿ 8 ಮೆಗಾ ವ್ಯಾಟ್ ಸಾಮರ್ಥ್ಯದ ಬೆಂಗಳೂರು ನಗರ ಘನ ತ್ಯಾಜ್ಯ ಆಧಾರಿತ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯ ಘನ ತ್ಯಾಜ್ಯ ವಿದ್ಯುತ್ ಯೋಜನೆಯ ಹಂಚಿಕೆ ಕ್ರಮ ಸಂಖ್ಯೆ : 1 ರಲ್ಲಿ ಅನುಮೋದಿಸಿದ್ದರನ್ವಯ ಕೂಲಂಕಷವಾಗಿ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 278 ಎನ್‌ಸಿಇ 2005, ಬೆಂಗಳೂರು, ದಿನಾಂಕ : 14ನೇ ಅಕ್ಟೋಬರ್ 2005**

ಮೆ: ಶ್ರೀನಿವಾಸ ಗಾಯಿತ್ರಿ ರಿಸೋರ್ಸ್ ರಿಕವರಿ ಲಿಮಿಟೆಡ್ ಕಂಪನಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬೆಂಗಳೂರು ಪೂರ್ವ ತಾಲ್ಲೂಕಿನ ಮಂಡೂರು ಗ್ರಾಮದಲ್ಲಿ 8 ಮೆಗಾ ವ್ಯಾಟ್ ಸಾಮರ್ಥ್ಯದ ಬೆಂಗಳೂರು ನಗರ ಘನ ತ್ಯಾಜ್ಯ ಆಧಾರಿತ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಈ ಕೆಳಗಿನ ನಿಬಂದನೆಗೊಳಪಟ್ಟು ಅನುಮತಿ ನೀಡಲಾಗಿದೆ.

1. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು ಮಾಡಿಕೊಳ್ಳುವುದು.
2. ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿ ಪಡೆದುಕೊಳ್ಳುವುದು.
3. ಎಲ್ಲೆಲ್ಲಿ ಶಾಸನಬದ್ಧ ಅನುಮತಿ ಅಗತ್ಯವೊ ಅದನ್ನು ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1479

**ಸುರೇಶ್.ಬಿ.ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯಃ-** ವೈದ್ಯಕೀಯ ಶಿಕ್ಷಣ ಇಲಾಖೆಯ ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ನಿಯೋಜನೆ ಮೇಲೆ ಉಪನ್ಯಾಸಕರ ಹುದ್ದೆಯಲ್ಲಿ ಸೇವಾ ನಿರತರಾಗಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಾ ಇಲಾಖೆ ಮತ್ತು ಇ.ಎಸ್.ಐ. ಇಲಾಖೆಯ ಹಿರಿಯ ತಜ್ಞರು, ತಜ್ಞರು ಮತ್ತು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಹಾಗೂ ವಿಮಾ ವೈದ್ಯಾಧಿಕಾರಿಗಳ ವಿಲನೀಕರಣ

**ಓದಲಾಗಿದೆ:-**
1. ತಾ. 30-10-1999 ಸಂಖ್ಯೆ: ಆಕುಕ 29 ಎಂಸಿಎಲ್ 99ರ ಸರ್ಕಾರಿ ಆದೇಶ.
2. ತಾ. 15-11-1999 ಸಂಖ್ಯೆ: ಆಕುಕ 29 ಎಂಸಿಎಲ್ 99 (ಭಾಗ-4)ರ ಸರ್ಕಾರಿ ಆದೇಶ.
3. ತಾ. 10-11-1999 ಸಂಖ್ಯೆ: ಆಕುಕ 29 ಎಂಸಿಎಲ್ 99ರ ಸರ್ಕಾರಿ ಆದೇಶ.
4. ತಾ. 05-02-2000 ಸಂಖ್ಯೆ: ಆಕುಕ 29 ಎಂಸಿಎಲ್ 99ರ ಸರ್ಕಾರಿ ಆದೇಶ.
5. ತಾ. 02-08-2005 ಸಂಖ್ಯೆ: ಆಕುಕ 2 ಎಂಸಿಎಲ್ 2005ರ ಸರ್ಕಾರಿ ಪತ್ರ.
6. ತಾ. 19-09-2005 ಮತ್ತು 22-09-2005 ಸಂಖ್ಯೆ: ಎಸ್ಆರ್ಓ(2)/ 45/2005-06ರ ಹಾಗೂ ಎಸ್ಆರ್ಓ(2)/58/2004-05ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರದಲ್ಲಿ ಅಂತ್ಯಗೊಂಡ ಪತ್ರ ವ್ಯವಹಾರ.

**ಪೀಠಿಕೆ:**

1. ಬೆಂಗಳೂರು ವೈದ್ಯಕೀಯ ಕಾಲೇಜು, ಮೈಸೂರು ವೈದ್ಯಕೀಯ ಕಾಲೇಜು, ಸರ್ಕಾರಿ ದಂತ ಕಾಲೇಜು ಮತ್ತು ಸ್ವಾಯುತ್ತ ಸಂಸ್ಥೆಗಳಾಗಿರುವ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಮತ್ತು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳ ವೈದ್ಯಕೀಯ ಶಿಕ್ಷಣ ಇಲಾಖೆಯ ಆಡಳಿತಾತ್ಮಕ ವ್ಯಾಪ್ತಿಯಲ್ಲಿ ಇವೆ. ಸದರಿ ವೈದ್ಯಕೀಯ ಕಾಲೇಜುಗಳಲ್ಲಿ ಮತ್ತು ದಂತ ಕಾಲೇಜಿನಲ್ಲಿ ಅನೇಕ ಉಪನ್ಯಾಸಕರು ವೃಂದ ಹುದ್ದೆಗಳಲ್ಲಿ 1999ರ ಭಾರತೀಯ ವೈದ್ಯಕೀಯ ಪರಿಷತ್ತು ವೈದ್ಯಕೀಯ ಸಂಸ್ಥೆಗಳಲ್ಲಿ ಅಧ್ಯಾಪಕರುಗಳ ಕನಿಷ್ಠ ವಿದ್ಯಾರ್ಹತೆ ಪರಿನಿಯಮಾವಳಿಯಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಮತ್ತು ಇ.ಎಸ್.ಐ.ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ತಜ್ಞರುಗಳು ಮತ್ತು ಹಿರಿಯ ತಜ್ಞರುಗಳು ಹಾಗೂ ವಿಮಾ ವೈದ್ಯಾಧಿಕಾರಿಗಳು ಉಪ ಶಸ್ತ್ರ ಚಿಕಿತ್ಸಕರು ನಿಯೋಜನೆ ಮೇಲೆ ಅವರ ಸ್ವಂತ ವೇತನ ಮತ್ತು ಶ್ರೇಣಿಯಲ್ಲಿ ಕರ್ತವ್ಯ ನಿರತರಾಗಿರುತ್ತಾರೆ. ಈ ಹಿಂದೆಯೂ ಸಹ ಈ ರೀತಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದ ಅಂತಹ ವೈದ್ಯಾಧಿಕಾರಿಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕೆಲವು ಷರತ್ತುಗಳಿಗೆ ಒಳಪಡಿಸಿ ವಿಲೀನಗೊಳಿಸಲಾಗಿದೆ.

2. ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ ಅನೇಕ ಉಪನ್ಯಾಸಕರುಗಳ ಖಾಲಿ ಹುದ್ದೆಗಳು ಇವೆ. ಅದರಲ್ಲೂ ಅನಾಟಮಿ, ಬಯೋ-ಕೆಮಿಸ್ಟ್ರಿ, ಫಿಜಿಯಾಲಜಿ, ಮೈಕ್ರೋ-ಬಯಾಲಜಿ, ಪಿ. ಅಂಡ್ ಎಸ್.ಎಂ. ಮತ್ತು ಫಾರ್ಮಾಕಾಲಜಿ ಉಪನ್ಯಾಸಕರುಗಳ ಕೊರತೆ ಇದೆ. ಕಾಲೇಜುಗಳ ಶೈಕ್ಷಣಿಕ ಮತ್ತು ಕ್ಲಿನಿಕಲ್ ಕಾರ್ಯಾಚರಣೆಗಾಗಿ ಭಾರತೀಯ ವೈದ್ಯಕೀಯ ಪರಿಷತ್ ಪರಿನಿಯಮಾವಳಿಯಲ್ಲಿ ನಿರ್ದಿಷ್ಟಪಡಿಸಿರುವ ಕನಿಷ್ಠ ಪ್ರಮಾಣದ ಉಪನ್ಯಾಸಕರುಗಳನ್ನು ನೇಮಕ ಮಾಡಲು ಕಾಲಕಾಲಕ್ಕೆ ನಿಯೋಜನೆ ಮೇಲೆ ಅಂತಹ ವೈದ್ಯಾಧಿಕಾರಿಗಳನ್ನು ಉಪನ್ಯಾಸಕರ ವೃಂದ ಹುದ್ದೆಯಲ್ಲಿ ನೇಮಕ ಮಾಡುವ ಪ್ರಕ್ರಿಯೆ ಜಾರಿಯಲ್ಲಿದೆ. ಅದು ಅವರುಗಳ ಸ್ವಂತ ವೇತನ ಮತ್ತು ಶ್ರೇಣಿಯ ಮೇಲೆ ಕಾರ್ಯನಿರತರಾಗಿದ್ದು ಸಾಕಷ್ಟು ಬೋಧನಾನುಭವವನ್ನು ಪಡೆದಿದ್ದಾರೆ. ಅವರುಗಳ ಬೋಧನಾನುಭವ, ವಿದ್ಯಾರ್ಹತೆ ಇತ್ಯಾದಿಗಳನ್ನು ಆಧರಿಸಿ ಅವರುಗಳನ್ನು ಉಪನ್ಯಾಸಕರ ವೃಂದದಲ್ಲಿ ವಿಲೀನಗೊಳಿಸುವುದರಿಂದ ವೈದ್ಯಕೀಯ ಕಾಲೇಜುಗಳಿಗೆ ಅಗತ್ಯವಾದ ಕನಿಷ್ಠ ಪ್ರಮಾಣದಲ್ಲಿ ನಿಯತವಾಗಿ ನೇಮಿಸಲು ಅನುವಾಗುತ್ತದೆ.

3. ವೈದ್ಯಕೀಯ ಶಿಕ್ಷಣ ಇಲಾಖೆಯ ಉಪನ್ಯಾಸಕರ ಹುದ್ದೆಗಳಿಗೆ ಕರ್ನಾಟಕ ಲೋಕಸೇವಾ ಆಯೋಗದ ಮೂಲಕ 1967ರ ಕರ್ನಾಟಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ (ಕಾಲೇಜು ವಿಭಾಗ) (ನೇಮಕಾತಿ) ನಿಯಮಾವಳಿಯೊಂದಿಗೆ ಓದಲಾದ 1998ರ ಎಂ.ಸಿ.ಐ. ವೈದ್ಯಕೀಯ ಸಂಸ್ಥೆಗಳಲ್ಲಿ ಅಧ್ಯಾಪಕರುಗಳಿಗೆ ಕನಿಷ್ಠ ವಿದ್ಯಾರ್ಹತೆ ಪರಿನಿಯಮಾವಳಿಯನುಸಾರ ಮಾಡಬೇಕಾಗಿದೆ. ನ್ಯಾಯಾಲಯದಲ್ಲಿ ಕೆಲವು ವ್ಯಾಜ್ಯಗಳು ಬಾಕಿ ಇದ್ದಕಾರಣ 1982 ರಿಂದ 1999ರ ವರೆಗೆ ಉಪನ್ಯಾಸಕರ ಹುದ್ದೆಗಳಿಗೆ ನೇರ ನೇಮಕಾತಿ ಮಾಡಿರಲಿಲ್ಲ. 1999 ಮತ್ತು 2000ನೇ ಸಾಲಿನಲ್ಲಿ ಉಪನ್ಯಾಸಕರ ಹುದ್ದೆಗಳಿಗೆ ಕರ್ನಾಟಕ ಲೋಕ ಸೇವಾ ಆಯೋಗದ ಮೂಲಕ ನೇರ ನೇಮಕಾತಿಯನ್ನು ಮಾಡಿದ್ದರು. ಕೆಲವು ಉಪನ್ಯಾಸಕರ ಹುದ್ದೆಗಳಿಗೆ ನೇಮಕಾತಿಯನ್ನು ಮಾಡಲು ಸಾಧ್ಯವಾಗಿರಲಿಲ್ಲ. ಆದಕಾರಣ ಮೇಲ್ಕಂಡ ವೈದ್ಯಾಧಿಕಾರಿಗಳನ್ನು ನಿಯೋಜನೆ ಮೇಲೆ ನೇಮಿಸಲಾಗಿದ್ದು ಅವರು ಪಡೆದಿರುವ ಬೋಧನಾನುಭವವನ್ನು ಪರಿಗಣಿಸಿ ಅವರುಗಳನ್ನು ಉಪನ್ಯಾಸಕರ ಹುದ್ದೆಯಲ್ಲಿ ವಿಲೀನಗೊಳಿಸುವುಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಮತ್ತು ಆರ್ಥಿಕ ಇಲಾಖೆಯ ಸಮಾಲೋಚನೆಯೊಂದಿಗೆ ಪರಿಶೀಲಿಸಲಾಗಿದೆ.

4. ವೈದ್ಯಕೀಯ ಶಿಕ್ಷಣ ಇಲಾಖೆಯ ಉಪನ್ಯಾಸಕರ ವೃಂದ ಹುದ್ದೆಗಳು 8000-13500 ರೂ.ಗಳ ವೇತನ ಶ್ರೇಣಿಯಲ್ಲಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ತಜ್ಞರು, ಹಿರಿಯ ತಜ್ಞರ ಹಾಗೂ ಇ.ಎಸ್.ಐ. ಇಲಾಖೆಯ ವಿಮಾ ವೈದ್ಯಾಧಿಕಾರಿಗಳ ಹುದ್ದೆಗಳು ರಾಜ್ಯ ವೇತನ ಶ್ರೇಣಿಯಲ್ಲಿವೆ. 1977ರ ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಾವಳಿಯ 16(a)(ii)ನೇ ನಿಯಮದಡಿ ರಾಜ್ಯ ಸರ್ಕಾರದ ಒಂದು ಇಲಾಖಾ ವೃಂದ ಹುದ್ದೆಯಿಂದ ಮತ್ತೊಂದು ಇಲಾಖಾ ವೃಂದ ಹುದ್ದೆಗೆ ವಿಲೀನಗೊಳಿಸಲು ಅವುಗಳು ಸಮಾನ ಶ್ರೇಣಿ:ದರ್ಜೆಯ ಹುದ್ದೆಗಳಾಗಿರಬೇಕು. ಆದರೆ ಅವುಗಳು ಬೇರೆ ದರ್ಜೆ:ಶ್ರೇಣಿ ಹುದ್ದೆಗಳಾಗಿರುವುದರಿಂದ ಸದರಿ 16(a)(ii) ನಿಯಮವನ್ನು ಸಡಿಲಿಸಿ ವಿಲೀನಗೊಳಿಸಲು ತಾತ್ವಿಕವಾಗಿ ನಿರ್ಧರಿಸಲಾಯಿತು.

5. ನಿಯೋಜನೆ ಮೇಲೆ ಉಪನ್ಯಾಸಕರ ವೃಂದ ಹುದ್ದೆಯಲ್ಲಿ ಸೇವಾ ನಿರತರಾಗಿದ್ದು ಅವರುಗಳು ಹೊಂದಿರುವ ಉಪನ್ಯಾಸಕರ ವೃಂದ ಹುದ್ದೆಯಲ್ಲಿ 8000-13500 ರೂ.ಗಳ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯಲ್ಲಿ ಮತ್ತು ಅದರಂತೆ ಅವರ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 43ನೇ ನಿಯಮದಡಿ ನಿರ್ಬಂಧಗೊಳಿಸಲು ಅವರುಗಳ ಜೇಷ್ಠತೆಯನ್ನು 1957ರ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಾವಳಿಯ 6ನೇ ನಿಯಮದಡಿ ನಿರ್ಧರಿಸಲು ಒಳಪಟ್ಟಿರುವ ಅಭಿಮತವನ್ನು ಪ್ರತಿಯೊಬ್ಬರಿಂದ ಪಡೆದು ಸಲ್ಲಿಸುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರನ್ನು ಕೋರಲಾಗಿದೆ.

6. ಅದರಂತೆ ಅವರುಗಳು ಸಲ್ಲಿಸಿರುವ ಅಭಿಮತವನ್ನು ವೈದ್ಯಕೀಯ ಶಿಕ್ಷಣ ನಿರ್ದೇಶಕರು ಸಲ್ಲಿಸಿ ನಿಯೋಜನೆ ಮೇಲೆ 31-07-2005ರವರೆಗೆ ಉಪನ್ಯಾಸಕರ ವೃಂದ ಹುದ್ದೆಯಲ್ಲಿ ಸೇವಾ ನಿರತರಾದ ಪ್ರತಿಯೊಬ್ಬ ಉಪನ್ಯಾಸಕರ ಸೇವಾ ವಿವರಣೆಯನ್ನು ವರ್ಗಾವಣೆ ಮೂಲಕ ವಿಲೀನಗೊಳಿಸಲು ಪ್ರಸ್ತಾಪಿಸಿರುತ್ತಾರೆ.

7. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ತಜ್ಞರು ಮತ್ತು ಹಿರಿಯ ತಜ್ಞರು ಹಾಗೂ ಇ.ಎಸ್.ಐ.ಇಲಾಖೆಯ ವಿಮಾ ವೈದ್ಯಾಧಿಕಾರಿಗಳು, ಶಸ್ತ್ರ ಚಿಕಿತ್ಸಕರು ಹಾಗೂ ಉಪ ಶಸ್ತ್ರಚಿಕಿತ್ಸಕರನ್ನು ವೈದ್ಯಕೀಯ ಶಿಕ್ಷಣ ಇಲಾಖೆಯ ಆಡಳಿತಾತ್ಮಕ ವಿಚಾರದಲ್ಲಿ ಸರ್ಕಾರಿ ವೈದ್ಯಕೀಯ ಕಾಲೇಜುಗಳಲ್ಲಿ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ

ನೇಮಕಾತಿ) ನಿಯಮಾವಳಿಯ 16(a)(ii)ನೇ ನಿಯಮವನ್ನು ಸಡಿಲಿಸಿ ಉಪನ್ಯಾಸಕರ ವೃಂದ ಹುದ್ದೆಯಲ್ಲಿ ವಿಲೀನಗೊಳಿಸಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 2 ಎಂಸಿಎಲ್ 2005, ಬೆಂಗಳೂರು, ದಿನಾಂಕ 20ನೇ ಅಕ್ಟೋಬರ್ 2005.**

8. ಈ ಕೆಳಕಂಡ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು, ತಜ್ಞರು, ಹಿರಿಯ ತಜ್ಞರು ಹಾಗೂ ಇ.ಎಸ್.ಐ. ಇಲಾಖೆಯ ವಿಮಾ ವೈದ್ಯಾಧಿಕಾರಿಗಳು, ಶಸ್ತ್ರ ಚಿಕಿತ್ಸಕರು ಮತ್ತು ಉಪ ಶಸ್ತ್ರ ಚಿಕಿತ್ಸಕರುಗಳನ್ನು ಈ ಸರ್ಕಾರಿ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜು, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಬೆಂಗಳೂರಿನ ಸರ್ಕಾರಿ ದಂತ ಕಾಲೇಜಿನ ಉಪನ್ಯಾಸಕ ವೃಂದಗಳ ಹುದ್ದೆಗಳಲ್ಲಿ ನಿಯೋಜನೆ ಮೇಲೆ ಸೇವಾ ನಿರತರಾದ ಅಂತಹ ವೈದ್ಯಾಧಿಕಾರಿಗಳನ್ನು 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ 16(a)(ii)ನೇ ನಿಯಮವನ್ನು ಸಡಿಲಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ವಿಲೀನಗೊಳಿಸಲಾಗಿದೆ. ಸದರಿ ವಿಲೀನವು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ:-

1. ವರ್ಗಾವಣೆ ಮೂಲಕ ಉಪನ್ಯಾಸಕರ ವೃಂದ ಹುದ್ದೆಯಲ್ಲಿ ವಿಲೀನಗೊಂಡು ಅವರ ಜೇಷ್ಠತೆಯನ್ನು ಈಗ ಹಾಲಿ ಉಪನ್ಯಾಸಕರ ಜೇಷ್ಠತಾಪಟ್ಟಿಯ ಕೆಳಭಾಗದಲ್ಲಿ ನಿಗದಿಪಡಿಸುವುದು;
2. ಈ ಆದೇಶದ ಪ್ರಕಾರ ಯಾವ ವಿಷಯದ ಉಪನ್ಯಾಸಕರ ವೃಂದ ಹುದ್ದೆಗೆ ವರ್ಗಾವಣೆ ಮೂಲಕ ವಿಲೀನಗೊಳಿಸಲಾಗಿದೆಯೋ ಅದೇ ವೃಂದ ಹುದ್ದೆಯಲ್ಲಿ ಶಾಶ್ವತವಾಗಿ ಜೇಷ್ಠತೆಯನ್ನು ನಿರ್ಧರಿಸತಕ್ಕದ್ದು.
3. ವೈದ್ಯಕೀಯ ಶಿಕ್ಷಣ ಇಲಾಖೆಗೆ ವರ್ಗಾವಣೆಯಾದ ಉಪನ್ಯಾಸಕರುಗಳ ವೇತನವನ್ನು 8000-13500 ರೂ.ಗಳ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯಲ್ಲಿ ನಿಗದಿಗೊಳಿಸತಕ್ಕದ್ದು. ಅವರುಗಳ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 43ನೇ ನಿಯಮದಡಿ ನಿರ್ಬಂಧಗೊಳಿಸತಕ್ಕದ್ದು. ಅವರುಗಳು ಈಗಾಗಲೇ ಪಡೆದಿರುವ ಕಾಲಮಿತಿ ವೇತನ ಬಡ್ತಿ ಸೌಲಭ್ಯಗಳನ್ನು ವೈಯಕ್ತಿಕ ಸೌಲಭ್ಯವೆಂದು ಪರಿಗಣಿಸತಕ್ಕದ್ದು. ಅಂತಹ ಸೌಲಭ್ಯವನ್ನು ಒಂದುಬಾರಿ ಪಡೆದಿದ್ದು ಅದನ್ನು ವೈಯಕ್ತಿಕ ಸೌಲಭ್ಯವೆಂದು ಪರಿಗಣಿಸತಕ್ಕದ್ದು. ಕಾಲಮಿತಿ ವೇತನ ಬಡ್ತಿ ಸೌಲಭ್ಯವನ್ನು ಪಡೆಯಲು ಅವಕಾಶವಿರುವುದರಿಂದ ವರ್ಗಾವಣೆಗೆ ಅಭಿಮತ ವ್ಯಕ್ತಪಡಿಸಿರುವವರು ಯಾವುದೇ ಅಂತಹ ಕಾಲಬದ್ಧ ಬಡ್ತಿ ಯೋಜನೆಗೆ ವಿಲೀನಗೊಂಡ ನಂತರ ಅರ್ಹರಾಗಿರುವುದಿಲ್ಲ. ಅಭಿಮತ ವ್ಯಕ್ತಪಡಿಸಿರುವವರು ಯಾವುದೇ ಆಯ್ಕೆ, ಭತ್ಯೆ ಇತ್ಯಾದಿಗಳಿಗೆ ಅರ್ಹರಾಗಿರುವುದಿಲ್ಲ.
4. ವರ್ಗಾವಣೆ ಮೂಲಕ ಉಪನ್ಯಾಸಕರ ವೃಂದ ಹುದ್ದೆಗೆ ವಿಲೀನಗೊಂಡಿರುವವರು ಉಪನ್ಯಾಸಕರ ಹುದ್ದೆಯನ್ನು ಪದಗ್ರಹಿಸುವ ಮೊದಲು ಅವರು ಸಂಬಂಧಿತ ವಿಷಯದಲ್ಲಿ ಸ್ನಾತಕೋತ್ತರ ಪದವಿ ವಿದ್ಯಾರ್ಹತೆಯನ್ನು ಪಡೆದಿರುವುದನ್ನು ಸಂಬಂಧಪಟ್ಟ ಪ್ರಾಂಶುಪಾಲರು ವಿಶ್ವವಿದ್ಯಾನಿಲಯದಿಂದ ಪದವಿ ಪ್ರಮಾಣ ಪತ್ರವನ್ನು ಪರಿಶೀಲಿಸಿ ಖಚಿತಪಡಿಸಿಕೊಳ್ಳತಕ್ಕದ್ದು.
5. ವರ್ಗಾವಣೆ ಮೂಲಕ ಯಾವ ಉಪನ್ಯಾಸಕರ ವೃಂದ ಹುದ್ದೆಗಳಿಗೆ ವಿಲೀನಗೊಳಿಸಲಾಗಿದೆಯೋ ಅಂತಹವರು 15 ದಿನಗಳ ಅವಧಿಯಲ್ಲಿ ಅಂತಹ ಉಪನ್ಯಾಸಕರ ಹುದ್ದೆಯನ್ನು ಪದಗ್ರಹಿಸತಕ್ಕದ್ದು. ತಪ್ಪಿದ್ದಲ್ಲಿ ಅವರುಗಳನ್ನು ಅವರ ಮೂಲ ಇಲಾಖೆಗೆ ಮರಳಿಸಲಾಗುವುದು.

9. ತಾ. 04-06-2005 ಸಂಖ್ಯೆ: ಸಿಆಸುಇ 861 ಸೇನಿಯೋ 2005ರ ಅನಧಿಕೃತ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ತಾ. 20-09-2005 ಸಂಖ್ಯೆ: ಆ 1092 ವೆಚ್ಚ-5/2005ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ವಿ. ಪ್ರಸಾದ್**

ಸರ್ಕಾರದ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

**ದಿನಾಂಕ 20-10-2005ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 2 ಎಂಸಿಎಲ್ 2005ರ**

**ಅನುಬಂಧ-1**

| ಕ್ರ. ಸಂ. | ಹೆಸರು ಮೂಲ ಇಲಾಖೆಯಲ್ಲಿ ಹೊಂದಿರುವ ಪದನಾಮ ಮತ್ತು ಇಲಾಖೆ | ನಿಯೋಜನೆ ಮೇಲೆಹೊಂದಿರುವ ಹುದ್ದೆಯ ಪದನಾಮ ಮತ್ತು ಕಾಲೇಜು | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನಿಯೋಜನೆ ಮೇಲೆ ಉಪನ್ಯಾಸಕ ರಾಗಿ ನೇಮಕ ಗೊಂಡ ದಿನಾಂಕ | ವಿಲೀನಗೊಂಡ ಹುದ್ದೆಯ ಹೆಸರು, ಪದನಾಮ ಮತ್ತು ಕಾಲೇಜು |
|---|---|---|---|---|---|---|
| 1 | 2 | 3 | 4 | 5 | 6 | 7 |
| | **ಫಿಸಿಯಾಲಜಿ** | | | | | |
| 1 | ಡಾ: ಬಿ.ಗಿರಿಜ, ಎಂಡಿ. (ಫಿಸಿಯಾಲಜಿ) ವಿಮಾ ವೈದ್ಯಾಧಿಕಾರಿಗಳು, ಇಎಸ್.ಐ.ಇಲಾಖೆ | ಫಿಸಿಯಾಲಜಿ ಉಪನ್ಯಾಸಕರು ಬಿ.ಎಂ.ಸಿ. ಬೆಂಗಳೂರು | 8-6-68 | 9-7-98 | 14-2-02 | ಫಿಸಿಯಾಲಜಿ ಉಪನ್ಯಾಸಕರು ಬಿ.ಎಂ.ಸಿ. ಬೆಂಗಳೂರು |

| 1 | 2 | 3 | 4 | 5 | 6 | 7 |
|---|---|---|---|---|---|---|
| | **ಫಾರ್ಮಕಾಲಜಿ** | | | | | |
| 2 | ಡಾ: ಎಸ್.ಪಿ.ಮಧುಚಂದ್ರ ಎಂ.ಡಿ. (ಫಾರ್ಮಕಾಲಜಿ) ಹಿರಿಯತಜ್ಞರು, ಆಕುಕ.ಸೇವೆಗಳ ಇಲಾಖೆ | ಫಾರ್ಮಕಾಲಜಿ ಉಪನ್ಯಾಸಕರು ಎಂಎಂಸಿ., ಮೈಸೂರು | 15–6–61 | 11–7–91 | 18.12.2000 | ಫಾರ್ಮಕಾಲಜಿ ಉಪನ್ಯಾಸಕರು ಎಂಎಂಸಿ., ಮೈಸೂರು |
| | **ಕಮ್ಯುನಿಟಿ ಮೆಡಿಸಿನ್** | | | | | |
| 3 | ಡಾ:ಶೋಭಾ, ಎಂಡಿ. (ಕಮ್ಯುನಿಟಿಮೆಡಿಸಿನ್) ತಜ್ಞರು, ಆಕುಕ ಸೇವೆಗಳ ಇಲಾಖೆ | ಕಮ್ಯುನಿಟಿಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 28–7–61 | 4–11–87 | 27–9–04 | ಕಮ್ಯುನಿಟಿಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| | **ಪೆಥಾಲಜಿ** | | | | | |
| 4 | ಡಾ: ಜಿ.ಎಸ್.ಶಾರದಾಮಣಿ ಎಂ.ಡಿ. (ಪೆಥಾಲಜಿ) ತಜ್ಞರು, ಆಕುಕ ಸೇವೆಗಳ ಇಲಾಖೆ | ಪೆಥಾಲಜಿ ಉಪನ್ಯಾಸಕರು ಬಿಎಂಸಿ, ಬೆಂಗಳೂರು | 20–3–52 | 16.11.79 ಸ್ಥಳೀಯ ಅಭ್ಯರ್ಥಿ 25–1–84 ಕೆಪಿಎಸ್‌ಸಿ | 14–7–2000 | ಪೆಥಾಲಜಿ ಉಪನ್ಯಾಸಕರು ಬಿಎಂಸಿ, ಬೆಂಗಳೂರು |
| 5 | ಡಾ:ಲಕ್ಷ್ಮೀಬಾಯಿ ಮಲ್ಲಪ್ಪ, ಎಂ.ಡಿ. (ಪೆಥಾಲಜಿ) ಹಿರಿಯತಜ್ಞರು, ಆಕುಕ ಸೇವೆಗಳ ಇಲಾಖೆ | ಪೆಥಾಲಜಿ ಉಪನ್ಯಾಸಕರು ಬಿಎಂಸಿ, ಬೆಂಗಳೂರು | 4–1–62 | 7–11–87 | 10–7–91 17–6–05 | ಪೆಥಾಲಜಿ ಉಪನ್ಯಾಸಕರು ಬಿಎಂಸಿ, ಬೆಂಗಳೂರು |
| 6 | ಡಾ:ವಾಣಿ ಆರ್.ಭಟ್, ಎಂ.ಡಿ. (ಪೆಥಾಲಜಿ) ಹಿರಿಯತಜ್ಞರು ಆಕುಕಸೇವೆಗಳಇಲಾಖೆ | ಪೆಥಾಲಜಿ ಉಪನ್ಯಾಸಕರು ಬಿಎಂಸಿ, ಬೆಂಗಳೂರು | 9–5–66 | 8–7–91 | 7–7–2001 | ಪೆಥಾಲಜಿ ಉಪನ್ಯಾಸಕರು ಬಿಎಂಸಿ, ಬೆಂಗಳೂರು |
| | **ಫೋರೆನ್ಸಿಕ್ ಮೆಡಿಸಿನ್** | | | | | |
| 7 | ಡಾ:ವೈ.ಉದಯಶಂಕರ್, ಎಂ.ಡಿ(ಎಫ್.ಎಂ)ತಜ್ಞರು, ಆಕುಕಸೇವೆಗಳ ಇಲಾಖೆ | ಫೋರೆನ್ಸಿಕ್ ಮೆಡಿಸಿನ್ ಉಪನ್ಯಾಸಕರು ಎಂಎಂಸಿ, ಮೈಸೂರು | 9–6–64 | 24–7–91 | 19–10–04 | ಫೋರೆನ್ಸಿಕ್ ಮೆಡಿಸಿನ್ ಉಪನ್ಯಾಸಕರು ಎಂಎಂಸಿ, ಮೈಸೂರು |
| | **ಜನರಲ್ ಮೆಡಿಸಿನ್** | | | | | |
| 8 | ಡಾ: ಬಿ.ಬೈರಾರೆಡ್ಡಿ, ಎಂಡಿ(ಜನರಲ್ ಮೆಡಿಸಿನ್) ತಜ್ಞರು, ಆಕುಕ ಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 30–11–49 | 28–10–79 | 3–2–05 | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 9 | ಡಾ: ನಾಗಪ್ಪ ಹಂಡರಗಲ್ ಎಂಡಿ(ಜನರಲ್ ಮೆಡಿಸಿನ್)ಹಿರಿಯತಜ್ಞರು ಆಕುಕಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 5–6–56 | 31–3–84 | 15–6–05 | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 10 | ಡಾ:ಕೆ.ಜಿ.ಪ್ರಕಾಶ್, ಎಂಡಿ(ಜನರಲ್ ಮೆಡಿಸಿನ್) ಹಿರಿಯತಜ್ಞರು ಆಕುಕಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 19–7–59 | 25–2–85 | 26–4–02 | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |

| 1 | 2 | 3 | 4 | 5 | 6 | 7 |
|---|---|---|---|---|---|---|
| 11 | ಡಾ: ಜೆ.ಇನ್ಬನಾಥನ್, ಎಂಡಿ(ಜನರಲ್ ಮೆಡಿಸಿನ್)ಹಿರಿಯತಜ್ಞರು ಆಕುಕಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ,ಮೈಸೂರು | 19–10–60 | 1–8–86 | 3–1–02 | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ, ಮೈಸೂರು |
| 12 | ಡಾ: ಕೆ.ಎಂ.ಶ್ರೀಧರ್, ಎಂಡಿ(ಜನರಲ್ ಮೆಡಿಸಿನ್) ಹಿರಿಯತಜ್ಞರು ಆಕುಕಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ,ಮೈಸೂರು | 13–11–62 | 7–8–86 | 26–2–01 | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ, ಮೈಸೂರು |
| 13 | ಡಾ: ಲಕ್ಷ್ಮೀಗೌಡ, ಎಂಡಿ(ಜನರಲ್ ಮೆಡಿಸಿನ್) ಹಿರಿಯತಜ್ಞರು ಆಕುಕಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ,ಮೈಸೂರು | 14–6–53 | 4–11–87 | 15–10–04 | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ, ಮೈಸೂರು |
| 14 | ಡಾ: ಸುನೀತ ಡಿ.ಕೆ. ಎಂಡಿ(ಜನರಲ್ ಮೆಡಿಸಿನ್) ಹಿರಿಯತಜ್ಞರು ಆಕುಕಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ,ಮೈಸೂರು | 19–2–64 | 6–11–87 | 12–7–02 | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ, ಮೈಸೂರು |
| 15 | ಡಾ: ಕೆ.ಆರ್.ರವೀಂದ್ರ, ಎಂಡಿ(ಜನರಲ್ ಮೆಡಿಸಿನ್) ಹಿರಿಯತಜ್ಞರು ಆಕುಕಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 13–1–64 | 9–11–87 | 23–2–01 | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 16 | ಡಾ: ಎನ್.ನಾರಾಯಣ ಸ್ವಾಮಿ ಎಂಡಿ(ಜನರಲ್ ಮೆಡಿಸಿನ್) ತಜ್ಞರು ಆಕುಕಸೇವೆಗಳ ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 16–7–58 | 11–11–87 | 4–11–04 | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 17 | ಡಾ:ಎಸ್.ಎಸ್.ರಮೇಶ್ ಎಂಡಿ(ಜನರಲ್ ಮೆಡಿಸಿನ್) ಹಿರಿಯತಜ್ಞರು ಆಕುಕಸೇವೆಗಳಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ,ಮೈಸೂರು | 10–3–64 | 24–7–91 | 31–1–05 | ಜನರಲ್ ಮೆಡಿಸಿನ್ ಉಪನ್ಯಾಸಕರು, ಎಂಎಂಸಿ, ಮೈಸೂರು |
| 18 | ಡಾ:ಮಧುಮತಿ ಆರ್. ಎಂಡಿ(ಜನರಲ್ ಮೆಡಿಸಿನ್) ವಿಮಾ ವೈದ್ಯಾಧಿಕಾರಿ ಇಎಸ್.ಐ.ಇಲಾಖೆ | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 28–6–61 | 27–11–97 | 25–7–02 | ಜನರಲ್ ಮೆಡಿಸಿನ್ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| | **ಜನರಲ್ ಸರ್ಜರಿ** | | | | | |
| 19 | ಡಾ: ರವಿಕರ್ ಜಯರಾಜ್, ಎಂಎಸ್ (ಜನರಲ್ಸರ್ಜರಿ) ಹಿರಿಯತಜ್ಞರು ಆಕುಕ ಸೇವೆಗಳ ಇಲಾಖೆ | ಜನರಲ್ ಸರ್ಜರಿ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 9–7–57 | 1–3–85 | 15–9–04 | ಜನರಲ್ ಸರ್ಜರಿ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 20 | ಡಾ: ಸಿ.ಕೆ.ಶಶಿಕಲಾ ಎಂಎಸ್ (ಜನರಲ್ಸರ್ಜರಿ) ಹಿರಿಯತಜ್ಞರು ಆಕುಕ ಸೇವೆಗಳಇಲಾಖೆ | ಜನರಲ್ ಸರ್ಜರಿ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 4–5–58 | 19–12–87 | 15–12–01 | ಜನರಲ್ ಸರ್ಜರಿ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |

| 1 | 2 | 3 | 4 | 5 | 6 | 7 |
|---|---|---|---|---|---|---|
| 21 | ಡಾ: ವಿ. ಶಶಿಕಲಾ ಎಂಎಸ್ (ಜನರಲ್‌ಸರ್ಜರಿ) ಹಿರಿಯತಜ್ಞರು ಆಕುಕ ಸೇವೆಗಳ ಇಲಾಖೆ | ಜನರಲ್ ಸರ್ಜರಿ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 30–8–61 | 29–2–88 | 5–10–01 | ಜನರಲ್ ಸರ್ಜರಿ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 22 | ಡಾ: ಜಿ.ರಾಜಶೇಖರಬಾಬು ಎಂಎಸ್ (ಜನರಲ್‌ಸರ್ಜರಿ) ತಜ್ಞರು, ಆಕುಕ ಸೇವೆಗಳ ಇಲಾಖೆ | ಜನರಲ್ ಸರ್ಜರಿ ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 20–7–62 | 30–8–88 | 4–10–04 | ಜನರಲ್ ಸರ್ಜರಿ ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| | **ಓ.ಬಿ.ಜಿ.** | | | | | |
| 23 | ಡಾ: ತ್ರಿಶೂಲ ಗುರುನಾಥ್, ಎಂ.ಡಿ.(ಓ.ಬಿ.ಜಿ.) ಜೋಷಿ, ಹಿರಿಯತಜ್ಞರು, ಆಕುಕ ಸೇವೆಗಳ ಇಲಾಖೆ | ಓ.ಬಿ.ಜಿ. ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 14–2–51 | 16–3–78 | 9–9–04 | ಓ.ಬಿ.ಜಿ. ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 24 | ಡಾ: ಕೆ.ಮೇಧಾವಿ, ಎಂ.ಡಿ.(ಓ.ಬಿ.ಜಿ.) ಹಿರಿಯತಜ್ಞರು, ಆಕುಕ ಸೇವೆಗಳ ಇಲಾಖೆ | ಓ.ಬಿ.ಜಿ. ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 22–6–51 | 8–5–78 ಸ್ಥಳೀಯ ಅಭ್ಯರ್ಥಿ 20–2–85 ಕೆಪಿಎಸ್,ಸಿ | 8–11–04 | ಓ.ಬಿ.ಜಿ. ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 25 | ಡಾ: ಎಂ.ಎ.ಚನಿವಾರ, ಎಂ.ಡಿ.(ಓ.ಬಿ.ಜಿ.) ತಜ್ಞರು, ಆಕುಕ ಸೇವೆಗಳ ಇಲಾಖೆ | ಓಬಿ.ಜಿ. ಉಪನ್ಯಾಸಕರು ಎಂಎಂಸಿ,ಮೈಸೂರು | 14–4–53 | 1–3–85 | 9–1–02 | ಓಬಿಜಿ. ಉಪನ್ಯಾಸಕರು ಎಂಎಂಸಿ, ಮೈಸೂರು |
| 26 | ಡಾ: ಆರ್.ಸಿ.ಪ್ರಮೀಳ ಎಂ.ಡಿ.(ಓ.ಬಿ.ಜಿ.) ಹಿರಿಯತಜ್ಞರು, ಆಕುಕ ಸೇವೆಗಳ ಇಲಾಖೆ | ಓಬಿಜಿ. ಉಪನ್ಯಾಸಕರು ಎಂಎಂಸಿ,ಮೈಸೂರು | 21–7–59 | 9–3–85 | 15–12–01 | ಓಬಿಜಿ. ಉಪನ್ಯಾಸಕರು ಎಂಎಂಸಿ, ಮೈಸೂರು |
| 27 | ಡಾ: ಜಿ.ಸುನಂದಬಾಯಿ, ಎಂ.ಡಿ.(ಓ.ಬಿ.ಜಿ.) ವಿಮಾ ವೈದ್ಯಾಧಿಕಾರಿ ಇಎಸ್.ಐ. ಇಲಾಖೆ | ಓ.ಬಿ.ಜಿ. ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 2–2–58 | 19–4–85 | 12–2–02 | ಓ.ಬಿ.ಜಿ. ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 28 | ಡಾ: ಕೆ.ಎಂ.ಸುನಂದ, ಎಂ.ಡಿ.(ಓ.ಬಿ.ಜಿ.) ಹಿರಿಯತಜ್ಞರು, ಆಕುಕ ಸೇವೆಗಳ ಇಲಾಖೆ | ಓ.ಬಿ.ಜಿ. ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 11–8–60 | 17–7–86 | 23–5–02 | ಓ.ಬಿ.ಜಿ. ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 29 | ಡಾ: ಆರ್.ಸುಧಾ, ಎಂ.ಡಿ.(ಓ.ಬಿ.ಜಿ.) ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಆಕುಕ ಸೇವೆಗಳ ಇಲಾಖೆ | ಓಬಿಜಿ. ಉಪನ್ಯಾಸಕರು ಎಂಎಂಸಿ,ಮೈಸೂರು | 6–11–66 | 11–10–91 | 22–6–05 | ಓಬಿಜಿ. ಉಪನ್ಯಾಸಕರು ಎಂಎಂಸಿ, ಮೈಸೂರು |
| | **ಇ.ಎನ್.ಟಿ.** | | | | | |
| 30 | ಡಾ:ಕೆ.ಎಲ್.ಶಿವಕುಮಾರ್, ಎಂ.ಎಸ್.(ಇ.ಎನ್.ಟಿ) ಹಿರಿಯ ತಜ್ಞರು, ಆಕುಕ ಸೇವೆಗಳ ಇಲಾಖೆ | ಇಎನ್.ಟಿ., ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 20–5–56 | 25–2–85 | 4–10–2000 | ಇಎನ್.ಟಿ., ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 31 | ಡಾ:ಜೆಸೂರ್ಯನಾರಾಯಣ, ಎಂ.ಎಸ್.(ಇ.ಎನ್.ಟಿ) ಹಿರಿಯ ತಜ್ಞರು ಆಕುಕ ಸೇವೆಗಳ ಇಲಾಖೆ | ಇಎನ್.ಟಿ., ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 12–9–56 | 28–2–85 | 21–11–01 | ಇಎನ್.ಟಿ., ಉಪನ್ಯಾಸಕರು, ಬಿಎಂಸಿ, ಬೆಂಗಳೂರು |

| 1 | 2 | 3 | 4 | 5 | 6 | 7 |
|---|---|---|---|---|---|---|
| 32 | ಡಾ: ಸರೋಜಮ್ಮ, ಎಂ.ಎಸ್.(ಇ.ಎನ್.ಟಿ) ಹಿರಿಯ ತಜ್ಞರು, ಆಕುಕ ಸೇವೆಗಳ ಇಲಾಖೆ | ಇಎನ್.ಟಿ., ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 9–6–54 | 9–4–85 | 23–3–01 | ಇಎನ್.ಟಿ., ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| 33 | ಡಾ: ಎಸ್.ಬಿ.ಪ್ರಕಾಶ್, ಎಂ.ಎಸ್.(ಇ.ಎನ್.ಟಿ) ಹಿರಿಯತಜ್ಞರು ಆಕುಕ ಸೇವೆಗಳ ಇಲಾಖೆ | ಇಎನ್.ಟಿ., ಉಪನ್ಯಾಸಕರು, ಎಂಎಂಸಿ,ಮೈಸೂರು | 31–8–55 | 30–8–88 | 21–5–01 | ಇಎನ್.ಟಿ., ಉಪನ್ಯಾಸಕರು, ಎಂಎಂಸಿ, ಮೈಸೂರು |
| 34 | ಡಾ: ಬಿ.ವೈ.ಪ್ರವೀಣ್ ಕುಮಾರ್, ಎಂ.ಎಸ್.(ಇ.ಎನ್.ಟಿ) ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಆಕುಕ ಸೇವೆಗಳ ಇಲಾಖೆ | ಇಎನ್.ಟಿ., ಉಪನ್ಯಾಸಕರು, ಎಂಎಂಸಿ,ಮೈಸೂರು | 16–8–69 | 13–8–97 | 18–7–05 | ಇಎನ್.ಟಿ., ಉಪನ್ಯಾಸಕರು, ಎಂಎಂಸಿ, ಮೈಸೂರು |
| 35 | ಡಾ: ಸಿ.ರವಿಶಂಕರ್, ಎಂ.ಎಸ್.(ಇ.ಎನ್.ಟಿ) ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಆಕುಕ ಸೇವೆಗಳ ಇಲಾಖೆ | ಇಎನ್.ಟಿ., ಉಪನ್ಯಾಸಕರು, ಬಿಎಂಸಿ, ಬೆಂಗಳೂರು | 18–3–72 | 30–8–02 | 13–5–05 | ಇಎನ್.ಟಿ., ಉಪನ್ಯಾಸಕರು, ಬಿಎಂಸಿ, ಬೆಂಗಳೂರು |
| | **ಆರ್ಥೋಪೆಡಿಕ್ಸ್** | | | | | |
| 36 | ಡಾ: ಪಿ.ಗೋಪಿನಾಥ್, ಎಂಎಸ್(ಆರ್ಥೋಪೆಡಿಕ್ಸ್) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ಆರ್ಥೋಪೆಡಿಕ್ಸ್ ಉಪನ್ಯಾಸಕರು, ಎಂಎಂಸಿ, ಮೈಸೂರು | 12–8–55 | 24–1–84 | 20–6–05 | ಆರ್ಥೋಪೆಡಿಕ್ಸ್ ಉಪನ್ಯಾಸಕರು, ಎಂಎಂಸಿ, ಮೈಸೂರು |
| 37 | ಡಾ: ಹೆಚ್.ಮಂಜುನಾಥ, ಎಂಎಸ್(ಆರ್ಥೋಪೆಡಿಕ್ಸ್) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ಆರ್ಥೋಪೆಡಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು | 25–4–55 | 1–3–85 | 13–7–05 | ಆರ್ಥೋಪೆಡಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು |
| 38 | ಡಾ: ಬಿ.ವಿ.ಪಾಂಡುರಂಗ, ಎಂಎಸ್(ಆರ್ಥೋಪೆಡಿಕ್ಸ್) ವಿಮಾ ವೈದ್ಯಾಧಿಕಾರಿ ಇ.ಎಸ್.ಐ.ಇಲಾಖೆ | ಆರ್ಥೋಪೆಡಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು | 20–7–59 | 1–4–85 | 8–2–01 | ಆರ್ಥೋಪೆಡಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು |
| 39 | ಡಾ:ವಿಜೆ.ಪುರುಷೋತ್ತಮ ಎಂಎಸ್(ಆರ್ಥೋಪೆಡಿಕ್ಸ್) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ಆರ್ಥೋಪೆಡಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು | 25–5–61 | 7–9–88 | 4–8–04 | ಆರ್ಥೋಪೆಡಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು |
| | **ಸ್ಕಿನ್ ಅಂಡ್ ಎಸ್.ಟಿ.ಡಿ** | | | | | |
| 40 | ಡಾ: ಕೆ.ಸರೋಜಿನಿ, ಎಂಡಿ(ಸ್ಕಿನ್ ಅಂಡ್ ಎಸ್.ಟಿ.ಡಿ) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ಸ್ಕಿನ್ ಅಂಡ್ ಎಸ್.ಟಿ.ಡಿ. ಉಪನ್ಯಾಸಕರು ಎಂಎಂಸಿ,ಮೈಸೂರು | 13–11–52 | 30–9–80 | 9–2–01 | ಸ್ಕಿನ್ ಅಂಡ್ ಎಸ್.ಟಿ.ಡಿ. ಉಪನ್ಯಾಸಕರು ಎಂಎಂಸಿ, ಮೈಸೂರು |
| 41 | ಡಾ: ಬಿ.ಲೀಲಾವತಿ, ಎಂಡಿ(ಸ್ಕಿನ್ ಅಂಡ್ ಎಸ್.ಟಿ.ಡಿ) ಹಿರಿಯ ತಜ್ಞರು, ಆಕುಕಸೇವೆಗಳ ಇಲಾಖೆ | ಸ್ಕಿನ್ ಅಂಡ್ ಎಸ್.ಟಿ.ಡಿ ಉಪನ್ಯಾಸಕರು ಬಿಎಂಸಿ.ಬೆಂಗಳೂರು | 10–1–60 | 25–2–85 | 2–2–01 | ಸ್ಕಿನ್ ಅಂಡ್ ಎಸ್.ಟಿ.ಡಿ ಉಪನ್ಯಾಸಕರು ಬಿಎಂಸಿ. ಬೆಂಗಳೂರು |
| 42 | ಡಾ: ಕೆ.ಎಸ್.ಮಹದೇವ ಎಂಡಿ(ಸ್ಕಿನ್ ಅಂಡ್ ಎಸ್.ಟಿ.ಡಿ) ಹಿರಿಯ ತಜ್ಞರು, ಆಕುಕಸೇವೆಗಳ ಇಲಾಖೆ | ಸ್ಕಿನ್ ಅಂಡ್ ಎಸ್.ಟಿ.ಡಿ. ಉಪನ್ಯಾಸಕರು ಎಂಎಂಸಿ,ಮೈಸೂರು | 4–4–55 | 1–3–85 | 31–1–05 | ಸ್ಕಿನ್ ಅಂಡ್ ಎಸ್.ಟಿ.ಡಿ. ಉಪನ್ಯಾಸಕರು ಎಂಎಂಸಿ, ಮೈಸೂರು |

| 1 | 2 | 3 | 4 | 5 | 6 | 7 |
|---|---|---|---|---|---|---|
| 43 | ಡಾ: ಜೆ.ರಾಜು, ಎಂಡಿ (ಸ್ಕಿನ್ ಅಂಡ್ ಎಸ್.ಟಿ.ಡಿ) ಹಿರಿಯ ತಜ್ಞರು, ಆಕುಕ ಸೇವೆಗಳ ಇಲಾಖೆ | ಸ್ಕಿನ್ ಅಂಡ್ ಎಸ್.ಟಿ.ಡಿ. ಉಪನ್ಯಾಸಕರು ಎಂಎಂಸಿ,ಮೈಸೂರು | 22–5–62 | 3–11–87 | 29–1–05 | ಸ್ಕಿನ್ ಅಂಡ್ ಎಸ್.ಟಿ.ಡಿ. ಉಪನ್ಯಾಸಕರು ಎಂಎಂಸಿ, ಮೈಸೂರು |
| 44 | ಡಾ: ಟಿ.ಎನ್.ರೇವತಿ, ಎಂಡಿ(ಸ್ಕಿನ್ ಅಂಡ್ ಎಸ್.ಟಿ.ಡಿ) ಹಿರಿಯ ತಜ್ಞರು, ಆಕುಕಸೇವೆಗಳ ಇಲಾಖೆ | ಸ್ಕಿನ್ ಅಂಡ್ ಎಸ್.ಟಿ.ಡಿ ಉಪನ್ಯಾಸಕರು ಬಿಎಂಸಿ.ಬೆಂಗಳೂರು | 1–1–62 | 5–11–87 | 10–1–01 | ಸ್ಕಿನ್ ಅಂಡ್ ಎಸ್.ಟಿ.ಡಿ ಉಪನ್ಯಾಸಕರು ಬಿಎಂಸಿ. ಬೆಂಗಳೂರು |
| 45 | ಡಾ: ಜಿ.ಎಸ್.ಆಶಾ, ಎಂಡಿ(ಸ್ಕಿನ್ ಅಂಡ್ ಎಸ್.ಟಿ.ಡಿ) ಹಿರಿಯ ತಜ್ಞರು, ಆಕುಕಸೇವೆಗಳ ಇಲಾಖೆ | ಸ್ಕಿನ್ ಅಂಡ್ ಎಸ್.ಟಿ.ಡಿ ಉಪನ್ಯಾಸಕರು ಬಿಎಂಸಿ.ಬೆಂಗಳೂರು | 28–11–62 | 18–7–91 | 5–9–03 | ಸ್ಕಿನ್ ಅಂಡ್ ಎಸ್.ಟಿ.ಡಿ ಉಪನ್ಯಾಸಕರು ಬಿಎಂಸಿ. ಬೆಂಗಳೂರು |
| | **ಅನೆಸ್ತೇಷಿಯಾಲಜಿ** | | | | | |
| 46 | ಡಾ:ಅರುಣಾ ತೆಗ್ಗಿನಮಠ್, ಎಂಡಿ(ಅನೆಸ್ತೇಷಿಯಾಲಜಿ) ಹಿರಿಯ ತಜ್ಞರು, ಆಕುಕಸೇವೆಗಳ ಇಲಾಖೆ | ಅನೆಸ್ತೇಷಿಯಾಲಜಿ ಉಪನ್ಯಾಸಕರು ಎಂಎಂಸಿ, ಮೈಸೂರು | 27–2–56 | 15–9–80 | 2–3–01 | ಅನೆಸ್ತೇಷಿಯಾಲಜಿ ಉಪನ್ಯಾಸಕರು ಎಂಎಂಸಿ, ಮೈಸೂರು |
| 47 | ಡಾ: ಪಿ.ಪ್ರಭಾ, ಎಂಡಿ(ಅನೆಸ್ತೇಷಿಯಾಲಜಿ) ತಜ್ಞರು, ಆಕುಕಸೇವೆಗಳ ಇಲಾಖೆ | ಅನೆಸ್ತೇಷಿಯಾಲಜಿ ಉಪನ್ಯಾಸಕರು ಬಿ.ಎಂ.ಸಿ., ಬೆಂಗಳೂರು | 22–2–59 | 27–2–85 | 5–3–01 | ಅನೆಸ್ತೇಷಿಯಾಲಜಿ ಉಪನ್ಯಾಸಕರು ಬಿ.ಎಂ.ಸಿ., ಬೆಂಗಳೂರು |
| 48 | ಡಾ: ಆರ್.ಶ್ರೇಯೋವತಿ, ಎಂಡಿ(ಅನೆಸ್ತೇಷಿಯಾಲಜಿ) ತಜ್ಞರು, ಆಕುಕ ಸೇವೆಗಳು ಇಲಾಖೆ | ಅನೆಸ್ತೇಷಿಯಾಲಜಿ ಉಪನ್ಯಾಸಕರು ಬಿ.ಎಂ.ಸಿ., ಬೆಂಗಳೂರು | 5–9–59 | 27–2–85 | 17–4–01 | ಅನೆಸ್ತೇಷಿಯಾಲಜಿ ಉಪನ್ಯಾಸಕರು ಬಿ.ಎಂ.ಸಿ., ಬೆಂಗಳೂರು |
| 49 | ಡಾ: ದೇವಿಕಾರಾಣಿ, ಎಂಡಿ(ಅನೆಸ್ತೇಷಿಯಾಲಜಿ) ತಜ್ಞರು, ಆಕುಕಸೇವೆಗಳಇಲಾಖೆ | ಅನೆಸ್ತೇಷಿಯಾಲಜಿ ಉಪನ್ಯಾಸಕರು ಬಿ.ಎಂ.ಸಿ., ಬೆಂಗಳೂರು | 21–8–61 | 1–3–85 | 25–10–2000 | ಅನೆಸ್ತೇಷಿಯಾಲಜಿ ಉಪನ್ಯಾಸಕರು ಬಿ.ಎಂ.ಸಿ., ಬೆಂಗಳೂರು |
| 50 | ಡಾ: ಜಿ.ದಿನೇಶ್, ಎಂಡಿ(ಅನೆಸ್ತೇಷಿಯಾಲಜಿ) ತಜ್ಞರು, ಆಕುಕಸೇವೆಗಳ ಇಲಾಖೆ | ಅನೆಸ್ತೇಷಿಯಾಲಜಿ ಉಪನ್ಯಾಸಕರು ಎಂಎಂಸಿ, ಮೈಸೂರು | 1–4–67 | 1–10–91 | 10–7–02 | ಅನೆಸ್ತೇಷಿಯಾಲಜಿ ಉಪನ್ಯಾಸಕರು ಎಂಎಂಸಿ, ಮೈಸೂರು |
| | **ಪೀಡಿಯಾಟ್ರಿಕ್ಸ್** | | | | | |
| 51 | ಡಾ: ಸಿ.ಬಿ.ಉಷಾಕಿರಣ್, ಎಂಡಿ.(ಪೀಡಿಯಾಟ್ರಿಕ್ಸ್), ತಜ್ಞರು, ಆಕುಕಸೇವೆಗಳ ಇಲಾಖೆ | ಪೀಡಿಯಾಟ್ರಿಕ್ಸ್ ಉಪನ್ಯಾಸಕರು ಎಂಎಂಸಿ, ಮೈಸೂರು | 11–11–59 | 23–2–85 | 13.12.01 | ಪೀಡಿಯಾಟ್ರಿಕ್ಸ್ ಉಪನ್ಯಾಸಕರು ಎಂಎಂಸಿ, ಮೈಸೂರು |
| 52 | ಡಾ: ಉದಯಕುಮಾರ್, ಎಂಡಿ.(ಪೀಡಿಯಾಟ್ರಿಕ್ಸ್), ತಜ್ಞರು, ಆಕುಕಸೇವೆಗಳ ಇಲಾಖೆ | ಪೀಡಿಯಾಟ್ರಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು | 9–4–60 | 20–9–85 | 2–7–02 | ಪೀಡಿಯಾಟ್ರಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು |
| 53 | ಡಾ: ಕೆ.ಧನಲಕ್ಷ್ಮಿ, ಎಂಡಿ.(ಪೀಡಿಯಾಟ್ರಿಕ್ಸ್), ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಆಕುಕಸೇವೆಗಳ ಇಲಾಖೆ | ಪೀಡಿಯಾಟ್ರಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು | 30–11–62 | 5–11–87 | 2–8–04 | ಪೀಡಿಯಾಟ್ರಿಕ್ಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು |

| 1 | 2 | 3 | 4 | 5 | 6 | 7 |
|---|---|---|---|---|---|---|
| | **ರೇಡಿಯೋಡಯಾಗ್ನಾಸಿಸ್** | | | | | |
| 54 | ಡಾ: ಹೆಚ್.ಸಿ.ರಾಮಣ್ಣ, ಎಂಡಿ.(ಆರ್.ಡಿ.) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ರೇಡಿಯೊ ಡಯಾಗ್ನಾಸಿಸ್ ಉಪನ್ಯಾಸಕರು, ಬಿ.ಎಂ.ಸಿ. ಬೆಂಗಳೂರು | 18–2–54 | 25–2–85 | 6–12–04 | ರೇಡಿಯೊ ಡಯಾಗ್ನಾಸಿಸ್ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು |
| 55 | ಡಾ:ಎಂ.ಆರ್.ಶಶಿಕುಮಾರ್ ಎಂಡಿ.(ಆರ್.ಡಿ.) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ರೇಡಿಯೊ ಡಯಾಗ್ನಾಸಿಸ್ ಉಪನ್ಯಾಸಕರು, ಎಂಎಂಸಿ, ಮೈಸೂರು | 4–5–58 | 1–8–86 | 8–10–01 | ರೇಡಿಯೊ ಡಯಾಗ್ನಾಸಿಸ್ ಉಪನ್ಯಾಸಕರು, ಎಂಎಂಸಿ, ಮೈಸೂರು |
| 56 | ಡಾ: ಎನ್.ಎಲ್. ರಾಜೇಂದ್ರಕುಮಾರ್, ಎಂಡಿ.(ಆರ್.ಡಿ.) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ರೇಡಿಯೊ ಡಯಾಗ್ನಾಸಿಸ್ ಉಪನ್ಯಾಸಕರು, ಎಂಎಂಸಿ, ಮೈಸೂರು | 12–1–61 | 8–8–86 | 19–11–04 | ರೇಡಿಯೊ ಡಯಾಗ್ನಾಸಿಸ್ ಉಪನ್ಯಾಸಕರು, ಎಂಎಂಸಿ, ಮೈಸೂರು |
| | **ಆಪ್ತಮಾಲಜಿ** | | | | | |
| 57 | ಡಾ: ಬಿ.ಎ.ಸುಮನ, ಎಂ.ಎಸ್.(ಆಪ್ತಮಾಲಜಿ) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ಆಪ್ತಮಾಲಜಿ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು | 4–5–52 | 31–7–80 | 21–7–94 | ಆಪ್ತಮಾಲಜಿ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು |
| 58 | ಡಾ:ಜಿ.ಎಸ್.ಗೋಪಿನಾಥ್, ಎಂ.ಎಸ್.(ಆಪ್ತಮಾಲಜಿ) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ಆಪ್ತಮಾಲಜಿ ಉಪನ್ಯಾಸಕರು, ಎಂಎಂಸಿ, ಮೈಸೂರು | 30–6–61 | 26–11–87 | 26–11–01 | ಆಪ್ತಮಾಲಜಿ ಉಪನ್ಯಾಸಕರು, ಎಂಎಂಸಿ, ಮೈಸೂರು |
| 59 | ಡಾ: ಡಿ.ಎನ್.ಪ್ರಕಾಶ್, ಎಂ.ಎಸ್.(ಆಪ್ತಮಾಲಜಿ) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ಆಪ್ತಮಾಲಜಿ ಉಪನ್ಯಾಸಕರು, ಎಂಎಂಸಿ, ಮೈಸೂರು | 7–3–63 | 1–9–88 | 12–7–02 | ಆಪ್ತಮಾಲಜಿ ಉಪನ್ಯಾಸಕರು, ಎಂಎಂಸಿ, ಮೈಸೂರು |
| 60 | ಡಾ:ಸಿ.ಎನ್.ಮಧುಸೂದನ್ ಎಂ.ಎಸ್.(ಆಪ್ತಮಾಲಜಿ) ತಜ್ಞರು, ಆಕುಕಸೇವೆಗಳ ಇಲಾಖೆ | ಆಪ್ತಮಾಲಜಿ ಉಪನ್ಯಾಸಕರು, ಎಂಎಂಸಿ, ಮೈಸೂರು | 20–4–67 | 18–7–91 | 29–1–05 | ಆಪ್ತಮಾಲಜಿ ಉಪನ್ಯಾಸಕರು, ಎಂಎಂಸಿ, ಮೈಸೂರು |
| 61 | ಡಾ:ಎನ್.ಮಂಜುಳಾದೇವಿ ಎಂ.ಎಸ್.(ಆಪ್ತಮಾಲಜಿ) ತಜ್ಞರು, ಆಕುಕಸೇವೆಗಳ ಇಲಾಖೆ | ಆಪ್ತಮಾಲಜಿ ಉಪನ್ಯಾಸಕರು, ಎಂಎಂಸಿ, ಮೈಸೂರು | 5–3–66 | 21–8–99 | 21–10–04 | ಆಪ್ತಮಾಲಜಿ ಉಪನ್ಯಾಸಕರು, ಎಂಎಂಸಿ, ಮೈಸೂರು |
| | **ಟಿ.ಬಿ.ಅಂಡ್ ಸಿ.ಡಿ.** | | | | | |
| 62 | ಡಾ: ಕರಣಪ್ಪ ಬಂಗಾರಿ, ಎಂಡಿ(ಟಿ.ಬಿ.ಅಂಡ್ ಸಿ.ಡಿ.) ತಜ್ಞರು, ಆಕುಕಸೇವೆಗಳ ಇಲಾಖೆ | ಟಿ.ಬಿ.ಅಂಡ್ ಸಿ.ಡಿ. ಉಪನ್ಯಾಸಕರು, ಎಂಎಂಸಿ, ಮೈಸೂರು | 3–3–51 | 23–1–84 | 19–11–01 | ಟಿ.ಬಿ.ಅಂಡ್ ಸಿ.ಡಿ. ಉಪನ್ಯಾಸಕರು, ಎಂಎಂಸಿ, ಮೈಸೂರು |
| 63 | ಡಾ:ಹೆಚ್.ಎಂ.ವಿರೂಪಾಕ್ಷ, ಎಂಡಿ(ಟಿ.ಬಿ.ಅಂಡ್ ಸಿ.ಡಿ.) ತಜ್ಞರು, ಆಕುಕಸೇವೆಗಳ ಇಲಾಖೆ | ಟಿ.ಬಿ.ಅಂಡ್ ಸಿ.ಡಿ. ಉಪನ್ಯಾಸಕರು, ಎಂಎಂಸಿ,ಮೈಸೂರು | 1–7–61 | 12–11–87 | 6–9–01 | ಟಿ.ಬಿ.ಅಂಡ್ ಸಿ.ಡಿ. ಉಪನ್ಯಾಸಕರು, ಎಂಎಂಸಿ, ಮೈಸೂರು |

| 1 | 2 | 3 | 4 | 5 | 6 | 7 |
|---|---|---|---|---|---|---|
| | **ಯುರಾಲಜಿ** | | | | | |
| 64 | ಡಾ: ಎಂ.ಶಿವಲಿಂಗಯ್ಯ ಎಂ.ಎಸ್. (ಜನರಲ್ ಸರ್ಜರಿ) ಹಿರಿಯತಜ್ಞರು, ಆಕುಕಸೇವೆಗಳ ಇಲಾಖೆ | ಯುರಾಲಜಿ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು | 24–3–63 | 7–11–87 | 5–7–02 | ಯುರಾಲಜಿ ಉಪನ್ಯಾಸಕರು, ಬಿ.ಎಂ.ಸಿ., ಬೆಂಗಳೂರು |

**ಡಿ.ವಿ.ಪ್ರಸಾದ್**
ಸರ್ಕಾರದ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ) ಬೆಂಗಳೂರು

**ದಿನಾಂಕ 20–10–2005ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 2 ಎಂಸಿಎಲ್ 2005ರ**
**ಅನುಬಂಧ–2**

| ಕ್ರ. ಸಂ. | ಹೆಸರು ಮೂಲ ಇಲಾಖೆಯಲ್ಲಿ ಹೊಂದಿರುವ ಪದನಾಮ ಮತ್ತು ಇಲಾಖೆ | ನಿಯೋಜನೆ ಮೇಲೆಹೊಂದಿರುವ ಹುದ್ದೆಯ ಪದನಾಮ ಮತ್ತು ಕಾಲೇಜು | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನಿಯೋಜನೆ ಮೇಲೆ ಉಪನ್ಯಾಸಕ ರಾಗಿ ನೇಮಕ ಗೊಂಡ ದಿನಾಂಕ | ವಿಲೀನಗೊಂಡ ಹುದ್ದೆಯ ಹೆಸರು, ಪದನಾಮ ಮತ್ತು ಕಾಲೇಜು |
|---|---|---|---|---|---|---|
| | **ಪ್ರಾಸ್ಥೋಡಾಂಟಿಕ್ಸ್** | | | | | |
| 1 | ಡಾ: ಪ್ರೇಮ, ಎಂಡಿಎಸ್ (ಪ್ರಾಸ್ಥೋ ಡಾಂಟಿಕ್ಸ್) ಹಿರಿಯ ದಂತ ವೈದ್ಯಾಧಿಕಾರಿ ಆಕುಕ ಸೇವೆಗಳ ಇಲಾಖೆ | ಪ್ರಾಸ್ಥೋಡಾಂಟಿಕ್ಸ್ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು | 13.10.64 | 12.4.93 | 14.5.2003 | ಪ್ರಾಸ್ಥೋಡಾಂಟಿಕ್ಸ್ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು |
| 2 | ಡಾ: ಎಸ್.ಕೆ.ವಿಶ್ವನಾಥ್, ಎಂಡಿಎಸ್(ಪ್ರಾಸ್ಥೋ ಡಾಂಟಿಕ್ಸ್) ಸಾಮಾನ್ಯ ಕರ್ತವ್ಯ ದಂತ ವೈದ್ಯಾಧಿಕಾರಿ ಆಕುಕ ಸೇವೆಗಳ ಇಲಾಖೆ | ಪ್ರಾಸ್ಥೋಡಾಂಟಿಕ್ಸ್ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು | 16.10.75 | 23.8.02 | 17.6.2005 | ಪ್ರಾಸ್ಥೋಡಾಂಟಿಕ್ಸ್ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು |
| | **ಆರ್ಥೋಡಾಂಟಿಕ್ಸ್** | | | | | |
| 3 | ಡಾ:ಹೆಚ್.ಸಿ.ರಾಮಕೃಷ್ಣ ಎಂಡಿಎಸ್(ಆರ್ಥೋ ಡಾಂಟಿಕ್ಸ್) ಮುಖ್ಯ ದಂತ ವೈದ್ಯಾಧಿಕಾರಿ ಆಕುಕ ಸೇವೆಗಳ ಇಲಾಖೆ | ಆರ್ಥೋಡಾಂಟಿಕ್ಸ್ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು | 22.7.57 | 20.6.84 | 21.8.2003 | ಆರ್ಥೋಡಾಂಟಿಕ್ಸ್ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು |
| | **ಕಮ್ಯುನಿಟಿ ಡೆಂಟಿಸ್ಟ್ರಿ** | | | | | |
| 4 | ಡಾ: ಆರ್.ಯಶೋದ, ಎಂಡಿಎಸ್ (ಕಮ್ಯುನಿಟಿ ಡೆಂಟಿಸ್ಟ್ರಿ) ಸಾಮಾನ್ಯ ಕರ್ತವ್ಯ ದಂತ ವೈದ್ಯಾಧಿಕಾರಿ ಆಕುಕ ಸೇವೆಗಳ ಇಲಾಖೆ | ಕಮ್ಯುನಿಟಿ ಡೆಂಟಿಸ್ಟ್ರಿ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು | 25.3.72 | 8.9.2000 | 1.12.2004 | ಕಮ್ಯುನಿಟಿ ಡೆಂಟಿಸ್ಟ್ರಿ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು |
| | **ಪೆರಿಯೋಡಾಂಷಿಯಾ** | | | | | |
| 5 | ಡಾ: ಎ.ಮಲ್ಲಿಕಾ, ಎಂ.ಡಿ.ಎಸ್. (ಪೆರಿಯೋಡಾಂಷಿಯಾ) ಹಿರಿಯ ದಂತ ವೈದ್ಯಾಧಿಕಾರಿ ಆಕುಕ ಸೇವೆಗಳ ಇಲಾಖೆ | ಪೆರಿಯೋಡಾಂಷಿಯಾ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು | 12.4.60 | 30.10.86 | 10.5.2005 | ಪೆರಿಯೋಡಾಂಷಿಯಾ ಉಪನ್ಯಾಸಕರು, ಸರ್ಕಾರಿ ದಂತ ಕಾಲೇಜ್ ಬೆಂಗಳೂರು |

**ಡಿ.ವಿ.ಪ್ರಸಾದ್**
ಪಿ.ಆರ್. 1483
ಸರ್ಕಾರದ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ) ಬೆಂಗಳೂರು.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:-** ಶ್ರೀ ಬಿ.ಸುರೇಂದ್ರನಾಥ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:-**
1. ನೋಟೀಸ್ ಕ್ರಮಾಂಕ:ಸಿಆಸುಇ 50 ಎಸ್ಇಎನ್ 02 ದಿನಾಂಕ 13.05.2005.
2. ಶ್ರೀ ಬಿ.ಸುರೇಂದ್ರನಾಥ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಲಿಖಿತ ಉತ್ತರ ದಿನಾಂಕ 10.08.2005.

**ಪ್ರಸ್ತಾವನೆ:**

ಶ್ರೀ ಬಿ.ಸುರೇಂದ್ರನಾಥ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಕರ್ನಾಟಕ ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯ ಪ್ರೌಢ ಶಿಕ್ಷಣ ವಿಭಾಗದ ಅಧೀನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯ ಶ್ರೀ ರವೀಂದ್ರ ಪದವಿ ಪೂರ್ವ ಕಾಲೇಜಿಗೆ ಸಂಬಂಧಿಸಿದಂತೆ ಬೇಜವಾಬ್ದಾರಿಯಿಂದ ಮೂಲ ದಾಖಲೆಗಳನ್ನು ಪರಿಶೀಲನೆ ಮಾಡದೆ ಹಾಗೂ ಮೇಲಾಧಿಕಾರಿಗಳ ಒಪ್ಪಿಗೆ ಇಲ್ಲದೆ ಕೆಲವೊಂದು ಖೋಟಾ ಆದೇಶದ ಪ್ರತಿಗಳನ್ನು ದೃಢೀಕರಿಸುವ ಆರೋಪಕ್ಕಾಗಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 13.05.2005ರ ನೋಟೀಸನ್ನು ನೀಡಿ ಸಮಜಾಯಿಷಿಯನ್ನು ಕೇಳುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಆರೋಪಿತ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿನಾಂಕ 10.08.2005 ರಂದು ಉತ್ತರ ಸಲ್ಲಿಸಿ, ಶ್ರೀ ರವೀಂದ್ರ ಪದವಿ ಪೂರ್ವ ಕಾಲೇಜು, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ ಇಲ್ಲಿಯ ಸಿಬ್ಬಂದಿ ನೇಮಕಾತಿಯನ್ನು ಅನುದಾನ ಸಹಿತವಾಗಿ ಅನುಮೋದಿಸುವ ಬಗೆಗೆ ಸದರಿ ಸಂಸ್ಥೆಯ ಆಡಳಿತ ವಿಭಾಗವು ಸರ್ಕಾರದ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯವರಿಗೆ ಕೆಲವು ದಾಖಲೆಗಳೊಂದಿಗೆ ಮೇಲ್ಮನವಿಯನ್ನು ಸಲ್ಲಿಸಿದಾಗ, ಈ ಮೇಲ್ಮನವಿಯನ್ನು ಕಾರ್ಯದರ್ಶಿಯವರು ತಿರಸ್ಕರಿಸಿ ಆದೇಶ ಹೊರಡಿಸಿದ ನಂತರ ಸದರಿ ಕಡತದಲ್ಲಿನ ಕೆಲವು ಆದೇಶಗಳ ದೃಢೀಕೃತ ಪ್ರತಿಗಳನ್ನು ಕೋರಿ ಸಂಸ್ಥೆಯು ಮಾಡಿದ ಮನವಿಯ ಮೇರೆಗೆ ದಾಖಲೆಗಳನ್ನು ದೃಢೀಕರಿಸಿ ನೀಡಲಾಗಿರುವುದರಿಂದ, ಈ ದೃಢೀಕರಿಸಿದ ಪ್ರತಿಗಳನ್ನು ನೀಡಿರುವುದರಲ್ಲಿ ಯಾವುದೇ ದುರುದ್ದೇಶ ಅಡಕವಾಗಿಲ್ಲವೆಂದು ತಿಳಿಸಿರುತ್ತಾರೆ. ದೃಢೀಕೃತ ಪತ್ರಗಳನ್ನು ಕೋರಿರುವವರು ಸಿಆಸು ಇಲಾಖೆಯ ಲೆಕ್ಕಪತ್ರ ವಿಭಾಗದಲ್ಲಿ ಸೂಕ್ತ ಹಣ ತುಂಬಿದ ರಸೀದಿಯೂ ಸಹ ಅರ್ಜಿಯ ಜೊತೆಗಿದ್ದುದನ್ನು ಗಮನಿಸಲಾಗಿರುತ್ತದೆಂದು, ಕಾರ್ಯದರ್ಶಿಯವರು ಮೇಲ್ಮನವಿಯನ್ನು ಪರಿಶೀಲಿಸಿದ ಸಮಯದಲ್ಲಿ ಸದರಿ ದಾಖಲೆಗಳನ್ನು ಅವಗಾಹಿಸಿದ್ದರಿಂದ ಪುನ: ದೃಢೀಕೃತ ದಾಖಲೆಗಳನ್ನು ನೀಡಿರುವುದರ ಕುರಿತು ಕಾರ್ಯದರ್ಶಿಯವರ ಅನುಮೋದನೆ ಪಡೆಯುವ ಅವಶ್ಯಕತೆ ಇರುವುದಿಲ್ಲವೆಂದು ಭಾವಿಸಿ ಹಾಗೂ ನ್ಯಾಯಾಲಯವು ಈ ಪ್ರಕರಣದಲ್ಲಿ ಅರ್ಜಿದಾರರ ಅರ್ಜಿಯನ್ನು ವಜಾ ಮಾಡಿರುವುದರಿಂದ ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಶ್ರೀ ಬಿ.ಸುರೇಂದ್ರನಾಥ್ ಅವರ ಉತ್ತರವನ್ನು ಪರಿಶೀಲಿಸಲಾಗಿ ಇದೊಂದು ಕಾಲೇಜು ವ್ಯವಸ್ಥಾಪಕ ಸಮಿತಿಯ ದುರುದ್ದೇಶದ ಕ್ರಮವಾಗಿರುತ್ತದೆಂದು ಗೋಚರವಾಗುತ್ತದೆ. ಪ್ರಶ್ನಿತ ಮೇಲ್ಮನವಿಯನ್ನು ಕಾರ್ಯದರ್ಶಿಯವರು ವಜಾ ಮಾಡುವ ಹಂತದಲ್ಲಾಗಲೀ ಅಥವಾ ಆಪಾದಿತರು ಸದರಿ ಆದೇಶ ದೃಢೀಕರಿಸುವ ಸಮಯದಲ್ಲಾಗಲೀ ಇದು ಖೋಟಾ ಆದೇಶವೆಂದು ತಿಳಿದು ಬಂದಿಲ್ಲ. ಈ ಖೋಟಾ ಆದೇಶದ ಮೇಲೆ ಕಾಲೇಜಿನವರು ನ್ಯಾಯಾಲಯಕ್ಕೆ ಸಲ್ಲಿಸಿರುವ ಅರ್ಜಿಯೂ ಸಹ ವಜಾ ಆಗಿರುತ್ತದೆ. ಈ ಖೋಟಾ ಆದೇಶವನ್ನು ಉಪಯೋಗಿಸಿಕೊಳ್ಳಲು ಖಾಸಗಿಯವರು ಮಾಡಿದ ಪ್ರಯತ್ನವು ವಿಫಲವಾಗಿರುವುದರಿಂದ ಹಾಗೂ ಇದರಿಂದಾಗಿ ಸರ್ಕಾರಕ್ಕೆ ಯಾವುದೇ ನಷ್ಟವುಂಟಾಗಿರುವುದಿಲ್ಲವಾದ್ದರಿಂದ, ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಅವರು ಎಸಗಿದ ದುರ್ನಡತೆಯನ್ನು ಸಣ್ಣ ಲೋಪವೆಂದು ಪರಿಗಣಿಸಿ ಆರೋಪಿತರ ಉತ್ತರವನ್ನು ಒಪ್ಪಿಕೊಂಡ ಸರ್ಕಾರವು ಜಾಗರೂಕತೆಯಿಂದ ವರ್ತಿಸಲು ಸೂಕ್ತ ಎಚ್ಚರಿಕೆಯನ್ನು ನೀಡಿ ಅವರನ್ನು ಆರೋಪಮುಕ್ತರನ್ನಾಗಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 50 ಎಸ್ಇಎನ್ 2002 ಬೆಂಗಳೂರು ದಿನಾಂಕ 19ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಶ್ರೀ ಬಿ.ಸುರೇಂದ್ರನಾಥ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿನಾಂಕ 13.05.2005ರ ನೋಟೀಸಿನಲ್ಲಿ ಮಾಡಿದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ ಹಾಗೂ ಇನ್ನು ಮುಂದೆ ಸರ್ಕಾರಿ ಕೆಲಸದಲ್ಲಿ ಜಾಗರೂಕತೆಯಿಂದ ವರ್ತಿಸುವಂತೆ ಸೂಕ್ತ ಎಚ್ಚರಿಕೆಯನ್ನು ಸಹ ಈ ಮೂಲಕ ನೀಡುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1492

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ENERGY SECRETARIAT**

**Sub:** Memorandum of Understanding between Govt. of Karnataka and M/s. Jewargi Power Private Ltd. (JPPL) to set up a 2 x 520 MW coal-based Thermal power plant at Jewargi, Gulbarga District.

**PREAMBLE :**

Tan Sri. Hamdan Mohamad, CEO & President of Ranhill Berhad of Malaysia, had met the Hon.'ble Chief Minister and informed that his Company is interested in developing a 2 x 520 MW coal-based Thermal Power Plant to be located near Jewargi Town, Gulbarga District. He proposed to have Joint Venture with KPCL with 80% equity by Ranhill and 20% equity by Karnataka Power Corporation Ltd. (KPCL).

Subsequently, Mr. Samyvellu, Minister for Works, Malaysia, Mr. Hamdan Mohamad and Sri. Javid Rahman, Director of Jewargi Power Private Limited, requested the Chief Minister that a Memorandum of Understanding (MOU) be signed by Government of Karnataka to set up a power plant at Jewargi.

Sri. Javid Rahman and Ms. Theresa Rajahser, Directors of Jewargi Power Private Ltd., have informed that JPPL is a Company which is registered in India with the aim of setting up a power plant at Jewargi and their main consortium partner is Ranhill Power Berhad, a sister company of Ranhill Berhad, which is in the fields of oil and gas, power, water and construction. They have submitted to the Energy Department a draft Memorandum of Understanding to be signed between Government of Karnataka and JPPL.

The draft MOU has been examined by Government and certain modifications have been made. Hence the following Order.

**Government Order No. EN 72 PPC 2005, Bangalore, Dated 29th October 2005**

The Government is pleased to accord approval to the draft Memorandum of Understanding to be entered in to between Government of Karnataka and M/s. Jewargi Power Private Ltd. for the implementation of the 2 x 520 MW coal-based Thermal power plant at Jewargi in Gulbarga District by M/s. Jewargi Power Private Limited, as per draft at Annexure.

This issues with the concurrence of Finance Department, vide No. FD 1775 Exp- I / 05 dated 5.10.2005.

By Order and in the name of the Governor of Karnataka,
**Suresh B. Krishnappanavar,**
Under Secretary to Govt., Energy Department.

**ANNEXURE**

**DRAFT**

**MEMORANDUM OF UNDER STANDING**

***Between***

**Government of Karnataka**

**&**

**M/s. Jewargi Power Private Limited**

**For**

**2 x 520 MW Coal based Thermal**

**Power Station at Jewargi, Gulbarga District**

**Bangalore, Dated _________ 2005**

**MEMORANDUM OF UNDER STANDING**

BETWEEN the Governor of Karnataka and M/s Jewargi Power Pvt. Limited (JPPL) for setting up of 2 x 520 MW capacity Thermal Power Project proposed in the State of Karnataka ("The Project").

This Memorandum of Understanding (MoU) is made this _____ day of ___________ 2005, at Bangalore between **Governor of Karnataka** represented by the Principal Secretary, Energy Department, Government of Karnataka, hereinafter referred to as "**The Government**" respectively which expression shall unless repugnant to the context or the meaning thereof, include its successors and assigns) of the **FIRST PART**.

**AND**

**Jewargi Power Private Limited** a Company incorporated under the Indian Companies Act, 1956 (Central Act 1 of 1956) and having its Registered Office at B-2, SPL Habitat, 138 Gangadhara Chetty Road, Ulsoor, Bangalore-560042 (hereinafter referred to as "**JPPL**", which expression shall, unless repugnant to the context or meaning thereof, include its successors and permitted assigns) of the **OTHER PART**.

**AND WHEREAS,** JPPL is desirous of establishing and operating a 2x520 MW (1040 MW) coal based Thermal Power Station in the State of Karnataka with the proposed investment of approx. Rs. 4000

Crores. JPPL proposes that the majority equity funds required for implementing the Project is through foreign direct investment (FDI).

**AND WHEREAS**, the Project will be set up in conformity with the various Constitutional and Statutory provisions and policies of the Government of India and Government of Karnataka in this regard.

**AND WHEREAS,** the Government of Karnataka and other departments agree to provide all necessary assistance and fullest co-operation to the company for successful implementation of the project in the State of Karnataka.

**NOW THEREFORE**, in consideration of the foregoing and all other related factors, the Government/other concerned departments and JPPL execute this MoU upon the terms, assurances, obligations and commitments as set out herein below:-

1. It is agreed by the Parties hereto that JPPL or a Generating Company formed by JPPL (hereinafter referred to as "The Generating Company") will set up "The Project" in the State of Karnataka.
2. The Generating Company will identify suitable site in Jewargi Taluk, Gulbarga District, Karnataka State and carry out necessary surveys for availability of land for Power Station and ash bund, source of coal, feasibility for movement of coal, water availability, power evacuation, etc. The Generating Company will prepare the Detailed Project Report (DPR) and obtain all necessary clearances from competent authorities.
3. It is agreed that the Generating Company will be allowed to wheel power to its Consumer(s) or licensee as permitted by the provisions of the Electricity Act, 2003. The Generating Company will be allowed to wheel power to its consumer(s) either through 400 kv line laying by KPTCL/other Grid Lines or its own dedicated lines as the conditions necessitate and as is technically feasible. The Generating Company will enter into a separate wheeling agreement for the purpose.
4. Power wheeling charges for the actual power wheeled through KPTCL/Power Grid Corporation Limited/others system will be payable to KPTCL/PGCL/others, along with other grid discipline charges as per guidelines stipulated by the Government of India and KPTCL or respective Electricity Regulatory Commissions from time to time.
5. The Generating Company will pay all taxes, duties/cess as applicable from time to time in the State of Karnataka.
6. The Government of Karnataka will facilitate all necessary steps for expeditious grant of permissions and approvals under the purview of the State Government such as allotment of required land, optimum requirement of water, other statutory and non-statutory clearances, etc and further facilitate recommendations to the Central Government or its Departments in order for the Generating Company to secure coal by way of coal linkage or subject to availability of coal blocks for Independent Power Producers, allocation of suitable Captive Coal Mines for the implementation of the Project. JPPL is also proposing to import coal as an other option.
7. The Govt. of Karnataka will extend all permissible incentives to JPPL that are available to Power Projects in the State as per the existing policy of the State Government.
8. The Generating Company shall be responsible to obtain all clearances/approvals related to Foreign Direct Investment as per Law.
9. The Government of Karnataka agrees to recommend the project to the Central Government to give mega project status further to avail customs and Excise Duty concessions, which can enable the generating company to reduce the tariff.
10. JPPL is proposing to offer equity to KPCL with mutually agreeable terms and conditions.
11. JPPL agrees that in mobilization of the FDI for implementing the Project, it will abide by statutory provisions of Reserve Bank of India (RBI), Foreign Investment Promotion Board (FIPB) and the policy of the Government of India and any other statutory provisions related with such investment.
12. It is agreed that the tariff for sale of electricity by the Generating Company to other consumers will be governed by such agreements to be entered into between seller and purchaser subject to the approval of the Karnataka Electricity Regulatory Commission.
13. Suitable manpower for the project for which this MoU is being executed will be engaged/recruited by the Generating Company from the State of Karnataka as per the prevailing policy of the State Government from time to time in this regard.

14. The Parties hereto agree to abide by all regulations and Acts notified by the Govt. of India as well as the Govt. of Karnataka from time to time.
15. GESCOM or other ESCOMs shall provide to the project, if required, adequate power for construction, erection, start-up and commissioning on payment basis at rates, terms & conditions as shall be prevailing on the date of such supply.
16. Any disputes or differences between the parties arising out of or in connection with this Memorandum of Understanding or interpretation thereof will be endeavoured to be resolved by the parties hereto by mutual negotiations, and failing that, the matter will be referred to the sole arbitration of the Chief Secretary to Government of Karnataka.

This MoU shall be effective from the date of signing by the parties hereto and shall be valid initially for a period of one year from the date of signing. The Government reserve the right to extend validity of this MoU or otherwise depending on the progress made by the Generating Company.

IN WITNESS WHEREOF, the representatives of the Parties to this MoU being duly authorized have hereunder set their hands, executed these presents and declared as herein above on the date, month and year herein above written.

FOR & ON BEHALF OF
GOVERNOR OF KARNATAKA

FOR & ON BEHALF OF
M/s. JEWARGI POWER
PRIVATE LIMITED

**DILIP RAU**
PRINCIPAL SECRETARY TO GOVT.
ENERGY DEPARTMENT,
GOVERNMENT OF KARNATAKA

**WITNESSES**

(1) ____________ (2) ________________

Place: Bangalore
Date : / /2005

**Suresh B. Krishnappanavar,**
Under Secretary to Govt., Energy Department.

P.R. 1552

**ಕಂದಾಯ ಸಚಿವಾಲಯ**

**ವಿಷಯ:-** ಚಕ್ರಾ ಸಾವೆಹಕ್ಲು ಯೋಜನೆಯಿಂದ ಜಮೀನು ಕಳೆದುಕೊಂಡ 228 ಸಂತ್ರಸ್ಥ ಕುಟುಂಬಗಳಿಗೆ ಶಿವಮೊಗ್ಗ ಜಿಲ್ಲೆಯ ಹಾಯ್ ಹೊಳೆ ಪುನರ್ವಸತಿ ಕೇಂದ್ರದಲ್ಲಿ ಜಮೀನು ಬದಲಿಗೆ ಹೆಚ್ಚುವರಿ ಪುನರ್ವಸತಿ ಅನುದಾನ ನೀಡಲು ಅನುಮೋದನೆ ಬಗ್ಗೆ.

**ಉಲ್ಲೇಖ:-**
1. ಕ.ವಿ.ನಿ.ಪತ್ರ ಸಂಖ್ಯೆ:ಎ1 ವಿ ಬಿ1/14367 ದಿನಾಂಕ:14.1.04.
2. ದಿನಾಂಕ:3.10.2003 ರಂದು ನಡೆದ ಉನ್ನತಾಧಿಕಾರಿ ಪುನರ್ವಸತಿ ಸಮಿತಿಯ 21ನೇ ಸಭೆಯ ನಡವಳಿ.
3. ವಿಶೇಷ ಭೂಸ್ವಾಧೀನಾಧಿಕಾರಿಯವರ ಪತ್ರ ಸಂಖ್ಯೆ:ಎಲ್ಎಕ್ಯೂ/ಆರ್‌ಹೆಚ್ಎಸ್:13:04-05 ದಿನಾಂಕ:17.3.2005.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕಿನ ಚಕ್ರಾ, ಸಾವೆಹಕ್ಲು ಯೋಜನೆಯಿಂದ ಶೇಖರಿಸಿದ ನೀರನ್ನು ಶರಾವತಿ ಜಲ ವಿದ್ಯುತ್ ಯೋಜನೆಗೆ ತಿರುವುಗೊಳಿಸುವ ಸಲುವಾಗಿ ಸದರಿ ಯೋಜನೆಯನ್ನು 1976ರಲ್ಲಿ ಪ್ರಾರಂಭಿಸಿ 1980ರಲ್ಲಿ ಪೂರ್ಣಗೊಳಿಸಲಾಗಿರುತ್ತದೆ. ಸದರಿ ಯೋಜನೆಯಿಂದ ಒಟ್ಟು 256 ಭೂ ಸಂತ್ರಸ್ಥರ ಕುಟುಂಬಗಳು ಬಾಧಿತರಾಗಿರುತ್ತಾರೆ. ಸದರಿ ಸಂತ್ರಸ್ಥರಿಗೆ ನಿಗದಿತ ಭೂ ಹಾಗೂ ಕಟ್ಟಡಗಳ ಪರಿಹಾರವನ್ನು ನೀಡಲಾಗಿರುತ್ತದೆ.

ಸದರಿ ಯೋಜನೆಯಿಂದ ಬಾಧಿತ ಭೂ ಸಂತ್ರಸ್ಥರ ಕುಟುಂಬಗಳಿಗೆ ಪುನರ್ವಸತಿ ಸೌಲಭ್ಯ ನೀಡುವ ಸಲುವಾಗಿ ಶಿವಮೊಗ್ಗ ಸಮೀಪದ ಆಗಸಹಳ್ಳಿ ಗ್ರಾಮ ಸ.ನಂ.167ರಲ್ಲಿ ಹಾಯ್‌ಹೊಳೆ ಪುನರ್ವಸತಿ ಕೇಂದ್ರವನ್ನು ಸ್ಥಾಪಿಸಿ, ಸುಮಾರು 447 ಎಕರೆ ಭೂಮಿಯನ್ನು ಸಮತಟ್ಟುಗೊಳಿಸಿ ಸಂತ್ರಸ್ಥರಿಗೆ ವಿತರಿಸುವ ಸಂದರ್ಭದಲ್ಲಿ, ಶರಾವತಿ ಯೋಜನೆಯ ಬಾಧಿತ ಸಂಸ್ತ್ರಸ್ಥರು ಹಾಗೂ ಇನ್ನಿತರರು ಸದರಿ ಜಮೀನುಗಳನ್ನು ಅತಿಕ್ರಮಿಸಿ ಕೊಂಡಿರುತ್ತಾರೆ. ಇದರಿಂದಾಗಿ ಚಕ್ರಾ ಸಾವೆಹಕ್ಲು ಯೋಜನೆಗೆ ಸೇರಿದ 28 ಭೂ ಸಂತ್ರಸ್ಥ ಕುಟುಂಬಗಳು ಮಾತ್ರ ಹಾಯ್‌ಹೊಳೆ ಪುನರ್ವಸತಿ ಕೇಂದ್ರದಲ್ಲಿ ನೆಲೆಸಲು ಸಾಧ್ಯವಾಗಿದ್ದು ನೀಡಿರುವ ಜಮೀನುಗಳಲ್ಲಿ ಸಾಗುವಳಿ ಮಾಡುತ್ತಿರುತ್ತಾರೆ. ಇನ್ನುಳಿದ 228 ಭೂ ಸಂತ್ರಸ್ಥರಿಗೆ ಜಮೀನುಗಳನ್ನು ವಿತರಿಸಲು ಸಾಧ್ಯವಾಗಿರಲಿಲ್ಲ. ಕಾರಣ ಭೂ ಸ್ವಾಧೀನ ಕಾಯ್ದೆ ಅನ್ವಯ ಸದರಿ ಸಂತ್ರಸ್ಥರು ಪುನರ್ವಸತಿ ಅನುದಾನ ಪಡೆಯಲು ಅರ್ಹರಿರುತ್ತಾರೆ. ದಿನಾಂಕ:28.12.1985ರ ಸರ್ಕಾರದ ಆದೇಶದನ್ವಯ ವಿದ್ಯುತ್ ಹಾಗೂ ನೀರಾವರಿ ಯೋಜನೆಯ ಬಾಧಿತ ಭೂ ಸಂತ್ರಸ್ಥರಿಗೆ ಈ ಕೆಳಗಿನ ಶ್ರೇಣಿಗಳಂತೆ ಪುನರ್ವಸತಿ ಅನುದಾನವನ್ನು ನೀಡಬೇಕಾಗಿರುತ್ತದೆ.

1 ಎಕರೆವರೆಗೆ ಜಮೀನು ಕಳೆದುಕೊಂಡ ಕುಟುಂಬಕ್ಕೆ: ರೂ.15,000-00
1 ರಿಂದ 5 ಎಕರೆ ಜಮೀನು ಕಳೆದುಕೊಂಡ ಕುಟುಂಬಕ್ಕೆ: ರೂ.20,000-00
5 ರಿಂದ ಮೇಲ್ಪಟ್ಟು ಜಮೀನು ಕಳೆದುಕೊಂಡ ಕುಟುಂಬಕ್ಕೆ: ರೂ.35,000-00

ಚಕ್ರಾ, ಸಾವೆಹಕ್ಲು ಯೋಜನೆಯ ಸಂತ್ರಸ್ಥರು ತಮ್ಮ ಜಮೀನುಗಳನ್ನು 1976 ರಲ್ಲೇ ಕಳೆದುಕೊಂಡಿದ್ದು ಇದುವರೆವಿಗೂ ಬದಲಿ ಜಮೀನನ್ನು ನೀಡಿಲ್ಲದಿರುವ ಕಾರಣ ಮೇಲಿನ ಪುನರ್ವಸತಿ ಅನುದಾನದ ಮೊತ್ತವನ್ನು ಬಹಳ ಕನಿಷ್ಟವೆಂದು ತಿರಸ್ಕರಿಸಿರುತ್ತಾರೆ. ಹಾಗೂ ಇದುವರೆವಿಗೂ ಕಳೆದು ಹೋಗಿರುವ ಕಾಲಾವಧಿಯನ್ನು ಪರಿಗಣಿಸಿ ಮೊತ್ತವನ್ನು ಸೇರಿಸಿ ಹೆಚ್ಚುವರಿ ಪುನರ್ವಸತಿ ಅನುದಾನವನ್ನು ನೀಡಲು ಕೋರಿರುತ್ತಾರೆ.

ಸಂತ್ರಸ್ಥರ ಸದರಿ ಬೇಡಿಕೆಯನ್ನು ಚಕ್ರಾ, ಸಾವೆಹಕ್ಲು ಮತ್ತು ವರಾಹಿ ಉನ್ನತಾಧಿಕಾರಿ ಪುನರ್ವಸತಿ ಸಮಿತಿಯ ಹಲವಾರು ಸಭೆಗಳಲ್ಲಿ ಚರ್ಚಿಸಲಾಗಿರುತ್ತದೆ. ಹಾಗೂ ದಿನಾಂಕ:3.10.2003 ರಂದು ನಡೆದ 21ನೇ ಉನ್ನತಾಧಿಕಾರಿ ಪುನರ್ವಸತಿ ಸಮಿತಿ ಸಭೆಯಲ್ಲಿ ಈ ಕೆಳಗಿನಂತೆ ತೀರ್ಮಾನಿಸಲಾಗಿರುತ್ತದೆ.

1985ರ ಸರ್ಕಾರಿ ಆದೇಶದಂತೆ ಚಕ್ರಾ ಸಾವೆಹಕ್ಲು ಯೋಜನೆಯಲ್ಲಿ ಜಮೀನು ಕಳೆದುಕೊಂಡು ಸಂತ್ರಸ್ಥರು ಪುನರ್ವಸತಿ ಅನುದಾನ ಪಡೆಯಲು ನಿರಾಕರಿಸಿರುತ್ತಾರೆ. ಪುನರ್ವಸತಿ ಅನುದಾನವನ್ನು ಸೂಕ್ತವಾಗಿ ಹೆಚ್ಚಿಸುವ ಸಲುವಾಗಿ ದಿನಾಂಕ:7.6.2003 ರಂದು ಶಿವಮೊಗ್ಗ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಸಭೆ ಕರೆದು ಚರ್ಚಿಸಲಾಯಿತು. ಉಪಸಮಿತಿಯ ವರದಿಯಲ್ಲಿ ಈ ಕೆಳಕಂಡಂತೆ ಪುನರ್ವಸತಿ ಅನುದಾನವನ್ನು ಪಾವತಿಸಲು ಕೋರಲಾಯಿತು.

| ಸ್ವಾಧೀನಪಡಿಸಿಕೊಂಡ ಜಮೀನು | ಅನುದಾನದ ಮೊತ್ತ |
|---|---|
| 1 ಎಕರೆಗೆ | ರೂ.50,000-00<br>(ಪ್ರತಿ ಕುಟುಂಬ) |
| 1 ಎಕರೆಯಿಂದ 5 ಎಕರೆವರೆಗೆ | ರೂ.65,000-00<br>(ಪ್ರತಿ ಕುಟುಂಬ) |
| 5 ಎಕರೆ ಮೇಲ್ಪಟ್ಟು | ರೂ.1,10,000-00<br>(ಪ್ರತಿ ಕುಟುಂಬ) |

ಸದರಿ ವಿಷಯದ ಕುರಿತು ದಿನಾಂಕ:20.9.2003ರಂದು ನಡೆದ ಉಪಸಮಿತಿಯ ಸಭೆಯಲ್ಲಿಯೂ ಚರ್ಚಿಸಿ ಮೇಲ್ಕಂಡ ದರದಂತೆ ಪುನರ್ವಸತಿ ಅನುದಾನ ಪಾವತಿಸುವುದು ಸೂಕ್ತ ಎಂದು ಅಭಿಪ್ರಾಯ ಪಡೆಯಲಾಗಿದೆ.

ಸದರಿ 228 ಸಂತ್ರಸ್ಥ ಕುಟುಂಬಗಳಿಗೆ ಮೇಲಿನ ಪ್ರಸ್ತಾವನೆಯಂತೆ ಪುನರ್ವಸತಿ ಅನುದಾನ ನೀಡಲು ತಗಲುವ ಒಟ್ಟು ವೆಚ್ಚ ರೂ.160.65ಲಕ್ಷ ಖರ್ಚಿನಲ್ಲಿ ಸೇರಿಸಲಾಗುವುದೆಂದು ಕರ್ನಾಟಕ ವಿದ್ಯುತ್ ನಿಗಮದ ವ್ಯವಸ್ಥಾಪಕ ನಿರ್ದೇಶಕರು ತಿಳಿಸಿರುತ್ತಾರೆ. ಹಾಗೂ ಸದರಿ ವಿಷಯ ಕುರಿತು ಪ್ರತ್ಯೇಕ ಸರ್ಕಾರಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕುಷ ಪರಿಶೀಲನೆ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 17 ಆರ್‌ಇಹೆಚ್ 2004 ದಿನಾಂಕ: 11ನೇ ಅಕ್ಟೋಬರ್ 2005**

1)ಚಕ್ರಾ ಸಾವೆಹಕ್ಲು ಹಾಗೂ ವರಾಹಿ ಯೋಜನೆಯ ಉನ್ನತಾಧಿಕಾರಿ ಸಮಿತಿಯ 21ನೇ ಸಭೆಯ ತೀರ್ಮಾನದಂತೆ ಹಾಗೂ ಕರ್ನಾಟಕ ವಿದ್ಯುತ್ ನಿಗಮದ ವ್ಯವಸ್ಥಾಪಕ ನಿರ್ದೇಶಕರವರ ಕೋರಿಕೆಯಂತೆ ಚಕ್ರಾ ಸಾವೆಹಕ್ಲು ಯೋಜನೆಯ ಬಾಧಿತ ಭೂ ಸಂತ್ರಸ್ಥರ ಪೈಕಿ 43 ಅರ್ಹ ಕುಟುಂಬಗಳಿಗೆ ಪರಿಹಾರವನ್ನು ಈ ಕೆಳಗೆ ನಮೂದಿಸಿರುವ ದರದಂತೆ ಪುನರ್ವಸತಿ ಅನುದಾನ ನೀಡಲು ಅನುಮೋದಿಸಲಾಗಿರುತ್ತದೆ.

ಅ) 1 ಎಕರೆ ತರಿ ಜಮೀನು ಅಥವಾ ಸಮನಾದ ಇತರೆ ಜಮೀನು ಕಳೆದುಕೊಂಡಿರುವ ಕುಟುಂಬಗಳಿಗೆ (ಪ್ರತಿ ಕುಟುಂಬಕ್ಕೆ) ರೂ.50,000-00

ಆ) 1 ಎಕರೆಯಿಂದ 5 ಎಕರೆ ವರೆಗೆ ತರಿ ಜಮೀನು ಅಥವಾ ಸಮನಾದ ಇತರೆ ಜಮೀನು ಕಳೆದುಕೊಂಡಿರುವ ಕುಟುಂಬ(ಪ್ರತಿ ಕುಟುಂಬಕ್ಕೆ) ರೂ.65,000-00

ಇ) 5 ಎಕರೆ ಹೆಚ್ಚಿನ ತರಿ ಜಮೀನು ಅಥವಾ ಸಮನಾದ ಇತರೆ ಜಮೀನು ಕಳೆದುಕೊಂಡಿರುವ ಕುಟುಂಬಗಳಿಗೆ ರೂ.1,10,000-00

2) ಸಂತ್ರಸ್ಥ ಕುಟುಂಬಗಳಲ್ಲಿ ಜಮೀನು ಮಂಜೂರಾತಿಗಾಗಿ ಅರ್ಜಿ ಸಲ್ಲಿಸಿದ 115 ಕುಟುಂಬಗಳಿಗೆ ಸರ್ಕಾರದ ಮಾರ್ಗಸೂಚಿಗಳನ್ವಯ ಪರಿಶೀಲನೆ ನಡೆಸಿ ಪುನರ್ವಸತಿ ಅರ್ಹರಾದವರಿಗೆ ಮಾತ್ರ ಪರಿಹಾರ ಒದಗಿಸುವುದು. ಈ ಜವಾಬ್ದಾರಿಯನ್ನು ಜಿಲ್ಲಾಧಿಕಾರಿಗಳಿಗೆ ನೀಡಿದೆ.

3) ಮೇಲ್ಕಂಡ ಯೋಜನೆಯಿಂದ ಸಂತ್ರಸ್ಥರಾದ 228 ಕುಟುಂಬಗಳ ಪೈಕಿ ಬಾಕಿ ಉಳಿದ ಸಂತ್ರಸ್ಥ ಕುಟುಂಬಗಳಿಗೆ ಪುನರ್ವಸತಿ ಪರಿಹಾರ ಕಲ್ಪಿಸುವ ಸಂದರ್ಭಗಳಲ್ಲಿ ಈಗಾಗಲೇ ಜಮೀನು ಪಡೆದ 98 ಸಂತ್ರಸ್ಥ ಕುಟುಂಬಗಳನ್ನು ಕೈಬಿಡುವುದು.

4) ಪುನರ್ವಸತಿ ಅನುದಾನ ನೀಡಲು ತಗಲುವ ವೆಚ್ಚವನ್ನು ನಿಗಮವೇ ಭರಿಸಿ ಈ ವೆಚ್ಚವನ್ನು ಯೋಜನೆಯ ಒಟ್ಟು ಖರ್ಚಿನಲ್ಲಿ ಸೇರಿಸುವುದು ಈ ಆದೇಶವು ಚಕ್ರಾ ಸಾವೆಹಕ್ಲು ಯೋಜನೆಯ ಬಾಧಿತ ಸಂತ್ರಸ್ಥರಿಗೆ ಮಾತ್ರ ಅನ್ವಯಿಸಲಾಗುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96,ದಿನಾಂಕ:10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1439

**ಎಂ.ಜೆ. ಕೌಜಲಗಿ**

ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ(ಪುನರ್ವಸತಿ)

## ಶಿಕ್ಷಣ ಸಚಿವಾಲಯ

**ವಿಷಯ:** ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಿಗೆ 2005-06ನೇ ಸಾಲಿನ ನಿರ್ವಹಣೆಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 110 ಯೋಯೋಕಾ 2002 ದಿ:6.5.2003.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 193 ಯೋಯೋಕಾ 2005 ದಿ:6.7.2005.
(ಇಡಿ 31 ಸ್ವೀಮರ (ಯೂನಿಕ್) 2005, ದಿನಾಂಕ:6.7.2005)

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಶಿಕ್ಷಣ ಇಲಾಖೆಯಿಂದ ವಿವಿಧ ಜಿಲ್ಲೆಗಳಲ್ಲಿ ನಡೆಯುತ್ತಿರುವ 32 ವಸತಿ ಶಾಲೆಗಳು ಮತ್ತು 4 ಅನುದಾನಿತ ವಸತಿ ಶಾಲೆಗಳನ್ನು ಹಾಲಿ ಇರುವಂತೆ ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಗೊಳಪಡುವ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಇವರಿಗೆ ರಾಜ್ಯ ವಲಯ ಮತ್ತು ಜಿಲ್ಲಾವಲಯ ಆಯ-ವ್ಯಯವನ್ನು ಸಂಬಂಧಿಸಿದ ಲೆಕ್ಕ ಶೀರ್ಷಿಕೆಯೊಂದಿಗೆ ವರ್ಗಾಯಿಸಲಾಗಿದೆ.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ 2005-06ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2202-02-800-1-05-101 (ಯೋಜನೇತರ) ಅಡಿಯಲ್ಲಿ ನಿಗದಿಯಾಗಿರುವ ರೂ.554.17 ಲಕ್ಷಗಳಲ್ಲಿ ರೂ.181.50 ಲಕ್ಷಗಳನ್ನು 33 ವಸತಿ ಶಾಲೆಗಳಿಗೆ ಜಿಲ್ಲಾ ಪಂಚಾಯತ್ ಮೂಲಕ ಬಿಡುಗಡೆ ಮಾಡಿ ಆದೇಶವನ್ನು ಹೊರಡಿಸಿದೆ. ಹಾಗೂ 2005-06ನೇ ಸಾಲಿಗೆ ಜಿಲ್ಲಾ ಪಂಚಾಯತ್‌ಗೆ ಸಂಬಂಧಿಸಿದ ಯೋಜನೇತರ ಅನುದಾನದ ವಿವರದ ಲಿಂಕ್ ಡಾಕ್ಯುಮೆಂಟ್‌ನಲ್ಲಿ ನಮೂದಿಸಿರುವ ಲೆಕ್ಕ ಶೀರ್ಷಿಕೆ 2202-02-110-3-56 (ಯೋಜನೇತರ) ಅಡಿಯಲ್ಲಿ ಗಾಂಧಿ ಗ್ರಾಮೀಣ ಗುರುಕುಲ, ಹೊಸರಿತ್ತಿ, (ಹಾವೇರಿ ಜಿಲ್ಲೆ)ಗೆ ಒಟ್ಟು 36.41 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು ಅದರಲ್ಲಿ 1/3 ಭಾಗವಾಗಿ ರೂ.12.14 ಲಕ್ಷಗಳನ್ನು ಗಾಂಧಿ ಗ್ರಾಮೀಣ ಗುರುಕುಲ, ಹೊಸರಿತ್ತಿ ಇವರಿಗೆ ಜಿಲ್ಲಾ ಪಂಚಾಯತ್ ಮೂಲಕ ಬಿಡುಗಡೆ ಮಾಡಲು ಸಹ ಅನುಮತಿಯನ್ನು ನೀಡಲಾಗಿದೆ.

2005-06ನೇ ಸಾಲಿನ ಆಯ-ವ್ಯಯದಲ್ಲಿ ರಾಜ್ಯವಲಯ ಲೆಕ್ಕ ಶೀರ್ಷಿಕೆ 2202-02-800-1-05-101 (ಯೋಜನೇತರ) ಅಡಿಯಲ್ಲಿ ರೂ.554.17 ಲಕ್ಷ ಅನುದಾನವನ್ನು ಒದಗಿಸಲಾಗಿದ್ದು, ಸದರಿ ಅನುದಾನದಲ್ಲಿ ಉಳಿದ ಭಾಗವನ್ನು ಅನುಬಂಧದಲ್ಲಿ ಲಗತ್ತಿಸಿರುವ ಒಟ್ಟು 33 ವಸತಿ ಶಾಲೆಗಳಿಗೆ ಅನುಬಂಧದಲ್ಲಿ ಲಗತ್ತಿಸಿರುವಂತೆ ಒಟ್ಟು ರೂ 370.00 ಲಕ್ಷಗಳನ್ನು ಹಾಗೂ 2005-06ನೇ ಸಾಲಿಗೆ ಜಿಲ್ಲಾ ಪಂಚಾಯ್ತಿಗಳಿಗೆ ಸಂಬಂಧಿಸಿದ ಯೋಜನೇತರ ಅನುದಾನದ ವಿವರದ ಲಿಂಕ್ ಡಾಕ್ಯುಮೆಂಟ್‌ನಲ್ಲಿ ನಮೂದಿಸಿರುವ ಲೆಕ್ಕಶೀರ್ಷಿಕೆ 2202-02-110-3-56 (ಯೋಜನೇತರ) ಅಡಿಯಲ್ಲಿ ಗಾಂಧಿ ಗ್ರಾಮೀಣ ಗುರುಕುಲ, ಹೊಸರಿತ್ತಿ, (ಹಾವೇರಿ ಜಿಲ್ಲೆ)ಗೆ ಒಟ್ಟು ರೂ.36.41 ಲಕ್ಷಗಳ ಅನುದಾನ ಒದಗಿಸಲಾಗಿದ್ದು, ಉಳಿದ ಭಾಗವನ್ನು ವಸತಿ ಶಾಲೆಗೆ ಬಳಸಲು ಅನುಮತಿಯನ್ನು ನೀಡಲು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 193 ಯೋಯೋಕಾ 2005, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2005**
**(ಇಡಿ 55 ಸ್ವೀಮರ (ಯೂನಿಕ್) 2005, ದಿನಾಂಕ: 22ನೇ ಅಕ್ಟೋಬರ್ 2005)**

2005-06ನೇ ಸಾಲಿನ ಆಯ-ವ್ಯಯದ ಲೆಕ್ಕ ಶೀರ್ಷಿಕೆ 2202-02-800-1-05-101 (ಯೋಜನೇತರ) ಅಡಿಯಲ್ಲಿ ನಿಗದಿಯಾಗಿರುವ ರೂ.554.17 ಲಕ್ಷಗಳಲ್ಲಿ ಒಟ್ಟು ರೂ.370.00 ಲಕ್ಷಗಳನ್ನು (ರೂ. ಮುನ್ನೂರ ಎಪ್ಪತ್ತು ಲಕ್ಷಗಳು ಮಾತ್ರ) 33 ವಸತಿ ಶಾಲೆಗಳಿಗೆ (ಅನುಬಂಧ ಲಗತ್ತಿಸಿದೆ) ಜಿಲ್ಲಾ ಪಂಚಾಯತ್‌ಗಳ ಮೂಲಕ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಯೋಜನೇತರ ಅನುದಾನದ ವಿವರದ ಲಿಂಕ್ ಡಾಕ್ಯುಮೆಂಟ್‌ನಲ್ಲಿ ನಮೂದಿಸಿರುವ ಲೆಕ್ಕ ಶೀರ್ಷಿಕೆ 2202-02-110-3-56 (ಯೋಜನೇತರ) ಅಡಿಯಲ್ಲಿ ಗಾಂಧಿ ಗ್ರಾಮೀಣ ಗುರುಕುಲ, ಹೊಸರಿತ್ತಿ, (ಹಾವೇರಿ ಜಿಲ್ಲೆ)ಗೆ ಅನುದಾನವನ್ನು ಒದಗಿಸಲಾಗಿದ್ದು, ರೂ.24.27 ಲಕ್ಷಗಳು (ರೂ. ಇಪ್ಪತ್ತನಾಲ್ಕು ಲಕ್ಷದ ಇಪ್ಪತ್ತೇಳು ಸಾವಿರ ಮಾತ್ರ) ಗಾಂಧಿ ಗ್ರಾಮೀಣ ಗುರುಕುಲ, ಹೊಸರಿತ್ತಿ, ಇವರಿಗೆ ಜಿಲ್ಲಾ ಪಂಚಾಯತ್ ಮೂಲಕ ಬಿಡುಗಡೆ ಮಾಡಲು ಸಹ ಅನುಮತಿಯನ್ನು ನೀಡಲಾಗಿದೆ.

ಸದರಿ ಮೊತ್ತವನ್ನು ಸಂಬಂಧಪಟ್ಟ ಲೆಕ್ಕ ಶೀರ್ಷಿಕೆಗಳಡಿ ಭರಿಸತಕ್ಕದ್ದು ಈ ಹಣವನ್ನು ಡ್ರಾ ಮಾಡಲು ಸಂಬಂಧಪಟ್ಟ ಜಿಲ್ಲಾ ಪಂಚಾಯತ್ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುಮತಿ ನೀಡಲಾಗಿದೆ.

ಸದರಿ ಲೆಕ್ಕ ಶೀರ್ಷಿಕೆಯನ್ನು ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್‌ಗಳಲ್ಲಿ ಅಳವಡಿಸುವಂತೆ ಈ ಲೆಕ್ಕ ಶೀರ್ಷಿಕೆಯು ಲಿಂಕ್ ಡಾಕ್ಯುಮೆಂಟ್‌ನಿಂದ ಹೊರತುಪಡಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅಧಿಕೃತ ಟಿಪ್ಪಣಿ ಸಂಖ್ಯೆ ಇಡಿ 693 ಐಎಫ್ (ಬಿಎ) 2005 ದಿನಾಂಕ:17.10.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 193 ಯೋಯೋಕಾ 2005, ದಿನಾಂಕ: 22ನೇ ಅಕ್ಟೋಬರ್ 2005ಕ್ಕೆ ಅನುಬಂಧ**
**ಎ-ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು**

| ಕ್ರ. ಸಂ. | ಜಿಲ್ಲೆಯ ಹೆಸರು | ಶಾಲೆ ನಡೆಯುತ್ತಿರುವ ಸ್ಥಳ | ಈಗ ಬಿಡುಗಡೆ ಮಾಡಿರುವ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|
| 1. | ಬೆಂಗಳೂರು ನಗರ ಜಿಲ್ಲೆ | ಚಾಮರಾಜನಗರ | 10.00 |
| 2. | ಬೆಂಗಳೂರು ಗ್ರಾಮಾಂತರ | ಐಜೂರು ರಾಮನಗರ | 10.00 |
| 3. | ಕೋಲಾರ | ಮದನಹಳ್ಳಿ | 10.00 |
| 4. | ತುಮಕೂರು | ಸಿದ್ದರಬೆಟ್ಟ | 10.00 |
| 5. | ಶಿವಮೊಗ್ಗ | ಗಾಜನೂರು | 10.00 |
| 6. | ಚಿತ್ರದುರ್ಗ | ಕಾತ್ರಾಳ | 10.00 |

| ಕ್ರ. ಸಂ. | ಜಿಲ್ಲೆಯ ಹೆಸರು | ಶಾಲೆ ನಡೆಯುತ್ತಿರುವ ಸ್ಥಳ | ಈಗ ಬಿಡುಗಡೆ ಮಾಡಿರುವ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|
| 7. | ಮೈಸೂರು | ನಂಜನಗೂಡು | 10.00 |
| 8. | ಮಂಡ್ಯ | ಕೆರೆತೆಣ್ಣೂರು | 10.00 |
| 9. | ಹಾಸನ | ಮಗಚಿ ವಿದ್ಯಾಪೀಠ ಕಂದಲಿ | 10.00 |
| 10. | ಚಿಕ್ಕಮಗಳೂರು | ಬೀಕನಹಳ್ಳಿ | 10.00 |
| 11. | ಕೊಡಗು | ಬಸವನಹಳ್ಳಿ | 10.00 |
| 12. | ದಕ್ಷಿಣ ಕನ್ನಡ | ಮುಲ್ಕಿ | 10.00 |
| 13. | ಬೆಳಗಾಂವ್ | ಸಂಕೇಶ್ವರ | 10.00 |
| 14. | ಬಿಜಾಪುರ | ಬಂಥವಾಳ | 10.00 |
| 15. | ಹಾವೇರಿ | ನೆಗಳೂರು | 10.00 |
| 16. | ಉತ್ತರ ಕನ್ನಡ | ಶಿರ್ಸಿ | 10.00 |
| 17. | ಗುಲ್ಬರ್ಗ | ಕೆಂಬಾವಿ | 10.00 |
| 18. | ಬಳ್ಳಾರಿ | ಹೊಸಪೇಟೆ | 10.00 |
| 19. | ಕೊಪ್ಪಳ | ಕುಷ್ಟಗಿ | 10.00 |
| 20. | ಬೀದರ್ | ಬಸವಕಲ್ಯಾಣ | 10.00 |

**ಬಿ-ಪರಿಶಿಷ್ಟ ವರ್ಗ ಮತ್ತು ಪರಿಶಿಷ್ಟ ಜಾತಿ ವಸತಿ ಶಾಲೆಗಳು**

| | | | |
|---|---|---|---|
| 1. | ದಾವಣಗೆರೆ ಜಿಲ್ಲೆ | ಮಾಯಗೊಂಡ | 10.00 |
| 2. | ಮೈಸೂರು ಜಿಲ್ಲೆ | ನಂಜನಗೂಡು | 10.00 |
| 3. | ಗುಲ್ಬರ್ಗಾ ಜಿಲ್ಲೆ | ಜಗತ | 10.00 |
| 4. | ಬಾಗಲಕೋಟೆ ಜಿಲ್ಲೆ | ಬಾಗಲಕೋಟೆ | 10.00 |

**ಸಿ-ಗಾಂಧಿ ತತ್ವ ಆಧಾರಿತ ವಸತಿ ಶಾಲೆ**

| | | | |
|---|---|---|---|
| 1. | ಬಳ್ಳಾರಿ ಜಿಲ್ಲೆ | ಚಳ್ಳಗುರ್ಕಿ | 10.00 |

**ಡಿ-ಮುಸ್ಲಿಂ ವಸತಿ ಶಾಲೆಗಳು**

| | | | |
|---|---|---|---|
| 1. | ಮಂಡ್ಯ ಜಿಲ್ಲೆ | ಶ್ರೀರಂಗಪಟ್ಟಣ | 10.00 |
| 2. | ಬೆಂಗಳೂರು ಗ್ರಾಮಾಂತರ | ರಾಮನಗರ | 10.00 |
| 3. | ದಕ್ಷಿಣ ಕನ್ನಡ ಜಿಲ್ಲೆ | ಕೋಟೆ ಕಾರ್ | 10.00 |
| 4. | ಬಿಜಾಪುರ ಜಿಲ್ಲೆ | ಬಿಜಾಪುರ | 10.00 |
| 5. | ಗುಲ್ಬರ್ಗಾ ಜಿಲ್ಲೆ | ಗುಲ್ಬರ್ಗಾ | 10.00 |

**ಇ-ಅನುದಾನಿತ ವಸತಿ ಶಾಲೆಗಳು**

| | | | |
|---|---|---|---|
| 1. | ಧಾರವಾಡ ಜಿಲ್ಲೆ | ಬುದ್ಧರಖಿತ ವಸತಿ ಶಾಲೆ ಧಾರವಾಡ | 15.00 |
| 2. | ಬೆಳಗಾವಿ ಜಿಲ್ಲೆ | ಕಿತ್ತೂರು ರಾಣಿ ಚೆನ್ನಮ್ಮ ಬಾಲಕಿಯರ ವಸತಿ ಶಾಲೆ ಕಿತ್ತೂರು | 40.00 |
| 3. | ಶಿವಮೊಗ್ಗ ಜಿಲ್ಲೆ | ಡಾ:ಅಂಬೇಡ್ಕರ್ ಹೆಣ್ಣುಮಕ್ಕಳ ವಸತಿ ಶಾಲೆ ಶಿವಮೊಗ್ಗ | 15.00 |
| | | **ಒಟ್ಟು ಮೊತ್ತ ರೂ.** | **370.00** |

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

ಪಿ.ಆರ್. 1535

**ವಿಷಯ:** ಬೆಳಗಾಂ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ ಕಿತ್ತೂರಿನ ರಾಣಿ ಚೆನ್ನಮ್ಮ ವಸತಿ ಶಾಲೆಯ ದುರಸ್ತಿ ಕಾಮಗಾರಿ ಕುರಿತು.

**ಉಲ್ಲೇಖ:**
1. ಮುಖ್ಯ ಇಂಜಿನಿಯರ್‌ರವರ ಕಚೇರಿ, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ ಇವರ ಪತ್ರ ಸಂಖ್ಯೆ: ಸಿಇಎನ್/ತಾಂ.ಸ-2/ಕಿತ್ತೂರ/ವಸತಿಶಾಲೆ/05-06 ದಿನಾಂಕ: 29.7.2005.
2. ಉಪನಿರ್ದೇಶಕರು (ಯೋಜನೆ), ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ:ಯೋ(i) ಕ.ವ.ಶಾಲೆ.ದುರಸ್ಥಿ 11/05-06 ದಿನಾಂಕ:3.9.2005.

**ಪ್ರಸ್ತಾವನೆ:**

ಮೇಲೆ (i) ರಲ್ಲಿ ಓದಲಾದ ಪತ್ರದಲ್ಲಿ ಬೆಳಗಾಂ ಜಿಲ್ಲೆ ಬೈಲಹೊಂಗಲ ತಾಲ್ಲೂಕ್‌ನ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಯ ದುರಸ್ತಿ ಕಾಮಗಾರಿಗಾಗಿ ಲೋಕೋಪಯೋಗಿ ಇಲಾಖೆಯ 2005-06ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 4202 ಶಿಕ್ಷಣ ಮೇಲಿನ ಬಂಡವಾಳ ವೆಚ್ಚ-ಪ್ರೌಢ ಶಿಕ್ಷಣ ಅಡಿಯಲ್ಲಿ 40.00 ಲಕ್ಷ ರೂ.ಗಳ ಅಂದಾಜು ಮೊತ್ತದೊಂದಿಗೆ ಸೇರಿದ್ದು, 2005-06ನೇ ಸಾಲಿಗೆ ಕೇವಲ ರೂ.1.00 ಲಕ್ಷ ಅನುದಾನವಿದೆ ಎಂದು ತಿಳಿಸಿರುತ್ತಾರೆ. ಈ ಕಾಮಗಾರಿಯ ಅಂದಾಜು ಪತ್ರಿಕೆಯನ್ನು 40.00 ಲಕ್ಷ ರೂಗಳಿಗೆ ತಯಾರಿಸಿದ್ದು ಆಡಳಿತಾತ್ಮಕ ಅನುಮೋದನೆ ಕೋರಿರುತ್ತಾರೆ. ಈ ಶಾಲೆಯ ರಜತ ಮಹೋತ್ಸವ ಆಚರಣೆಗೆ ಭಾರತದ ಮಾನ್ಯ ರಾಷ್ಟ್ರಪತಿಗಳು ಭಾಗವಹಿಸುವ ಕಾರ್ಯಕ್ರಮವಿದೆ. ಈ ಕಾರ್ಯಗಾರಿಯನ್ನು ತುರ್ತಾಗಿ ಪ್ರಸಕ್ತ ವರ್ಷದಲ್ಲಿಯೇ ಕೈಗೊಳ್ಳಬೇಕಾದಲ್ಲಿ ಈ ಕಾಮಗಾರಿಯ ಅಂದಾಜು ಮೊತ್ತದ ಕನಿಷ್ಠ ಶೇಕಡಾ 30 ರಷ್ಟು ಅನುದಾನದ ಅವಶ್ಯಕತೆ ಇದೆಯೆಂದು ರೂ.11.00 ಲಕ್ಷ ಅನುದಾನವನ್ನು ನಿಗದಿಪಡಿಸಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಬೇಕೆಂದು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಾಲೆಯ ದುರಸ್ಥಿ ಕಾಮಗಾರಿಗಾಗಿ ಅಂದಾಜು ಮೊತ್ತದ ಕನಿಷ್ಠ ಶೇಕಡ 30 ರಷ್ಟು ಅನುದಾನದ ಅವಶ್ಯಕತೆ ಇದ್ದು ರೂ.11.00 ಲಕ್ಷಗಳ ಅನುದಾನವನ್ನು ನೀಡುವಂತೆ ತಿಳಿಸಿ ಸದರಿ ಮೊತ್ತವನ್ನು ಲೋಕೋಪಯೋಗಿ ಇಲಾಖೆಯ ಲೆಕ್ಕ ಶೀರ್ಷಿಕೆ 4202-ಶಿಕ್ಷಣ ಇಲಾಖೆಯ ಬಂಡವಾಳ ವೆಚ್ಚದಲ್ಲಿ ಅನುದಾನವನ್ನು ಒದಗಿಸಿ, ಕಾಮಗಾರಿಯನ್ನು ಕೈಗೆತ್ತಿಕೊಳ್ಳುವಂತೆ ಲೋಕೋಪಯೋಗಿ ಇಲಾಖೆಗೆ ಆದೇಶ ನೀಡುವಂತೆ ಕೋರುತ್ತಾ, ಲೋಕೋಪಯೋಗಿ ಇಲಾಖೆ, ಬೆಳಗಾಂ ವಿಭಾಗ, ಬೈಲಹೊಂಗಲ ಉಪವಿಭಾಗದಿಂದ ಕಳುಹಿಸಲಾದ ಅಂದಾಜು ಪತ್ರಿಕೆ ರೂ.40,00,000/-ಗಳು ಹಾಗೂ ನೀಲಿ ನಕಾಶೆಯನ್ನು ತಯಾರಿಸಿ ಸಲ್ಲಿಸುತ್ತಾ ಆಡಳಿತಾತ್ಮಕ ಅನುಮೋದನೆ ಹಾಗೂ ಮೇಲು ರುಜುವಿಗಾಗಿ ಸಲ್ಲಿಸಿರುತ್ತಾರೆ ಹಾಗೂ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಕೋರಿರುತ್ತಾರೆ.

ಉಪ ನಿರ್ದೇಶಕರು (ಯೋಜನೆ), ಸಾರ್ವಜನಿಕ ಶಿಕ್ಷಣ ಇಲಾಖೆ ಅವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಶಿಇ 322 ಯೋಯೋಕಾ 2005, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2005**
**(ಇಡಿ 57 ಸ್ವೀಮರ (ಯೂನಿಕ್) 2005, ದಿನಾಂಕ: 25ನೇ ಅಕ್ಟೋಬರ್ 2005)**

ಬೆಳಗಾಂ ಜಿಲ್ಲೆ ಬೈಲಹೊಂಗಲ ತಾಲ್ಲೂಕ್‌ನ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಯ ದುರಸ್ತಿ ಕಾಮಗಾರಿಗಾಗಿ, 2005-06ನೇ ಸಾಲಿನ ಪೂರಕ ಅಂದಾಜಿನ (ಮೊದಲನೆ ಕಂತು) ಶಿಕ್ಷಣ ಇಲಾಖೆಯ ಅಭಿಯಾಚನೆ ಸಂಖ್ಯೆ: 17 ಬಾಬ್ತು ಸಂಖ್ಯೆ 4 ರಲ್ಲಿ ಕಿತ್ತೂರಿನ, ಕಿತ್ತೂರು ರಾಣಿ ಚೆನ್ನಮ್ಮ ಬಾಲಕಿಯರ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ರೂ.40.00 ಲಕ್ಷಗಳನ್ನು ಒದಗಿಸಲಾಗಿದ್ದು, ಒಟ್ಟು ರೂ. 153.00 ಲಕ್ಷಗಳನ್ನು ಅಭಿಯಾಚನೆ ಲೆಕ್ಕ ಶೀರ್ಷಿಕೆ 4202-01-202-1-01 (ಯೋಜನೆ) ಉಪಶೀರ್ಷಿಕೆ 139 ಪ್ರಧಾನ ಕಾಮಗಾರಿಗಳ ಅಡಿಯಲ್ಲಿ ಒಟ್ಟು ರೂ. 153.00 ಲಕ್ಷ (ಒಂದು ನೂರ ಐವತ್ತಮೂರು ಲಕ್ಷಗಳು ಮಾತ್ರ) ಒದಗಿಸಲಾಗಿರುತ್ತದೆ.

ಬೆಳಗಾಂ ಜಿಲ್ಲೆ ಬೈಲಹೊಂಗಲ ತಾಲ್ಲೂಕ್‌ನ ಕಿತ್ತೂರು ರಾಣಿ ಚೆನ್ನಮ್ಮ ಹೆಣ್ಣುಮಕ್ಕಳ ವಸತಿ ಶಾಲೆಯ ದುರಸ್ತಿ ಕಾಮಗಾರಿಯ ರೂ.40.00 ಲಕ್ಷಗಳ (ನಲವತ್ತು ಲಕ್ಷಗಳು ಮಾತ್ರ) ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಹಾಗೂ ಅಂದಾಜು ಪಟ್ಟಿಯ 1/3 ಭಾಗವಾಗಿ ರೂ.13.33 ಲಕ್ಷಗಳನ್ನು (ರೂಪಾಯಿ ಹದಿಮೂರು ಲಕ್ಷ ಮೂವತ್ತಮೂರು ಸಾವಿರ ಮಾತ್ರ) ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡಿ ಆದೇಶಿಸಲಾಗಿದೆ. ಸದರಿ ಲೆಕ್ಕಶೀರ್ಷಿಕೆಯು ಲಿಂಕ್ ಡಾಕ್ಯುಮೆಂಟ್‌ನಿಂದ ಹೊರತುಪಡಿಸಿದೆ.

ಶಿಕ್ಷಣ ಇಲಾಖೆಯ ಅಭಿಯಾಚನೆ ಸಂಖ್ಯೆ: 17 ಬಾಬ್ತು ಸಂಖ್ಯೆ 4ರಲ್ಲಿ ಕಿತ್ತೂರಿನ, ಕಿತ್ತೂರು ರಾಣಿ ಚೆನ್ನಮ್ಮ ಬಾಲಕಿಯರ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ರೂ.40.00 ಲಕ್ಷಗಳನ್ನು (ರೂಪಾಯಿ ನಲವತ್ತು ಲಕ್ಷಗಳು ಮಾತ್ರ) ಒದಗಿಸಲಾಗಿದ್ದು, ಅಭಿಯಾಚನೆ ಲೆಕ್ಕ ಶೀರ್ಷಿಕೆ 4202-01-202-1-01 (ಯೋಜನೆ) ಉಪಶೀರ್ಷಿಕೆ 139 ಪ್ರಧಾನ ಕಾಮಗಾರಿಗಳು ಇದರ ಅಡಿಯಲ್ಲಿ ಸದರಿ ವೆಚ್ಚವನ್ನು ಭರಿಸತಕ್ಕದ್ದು.

ಕೈಗೆತ್ತಿಕೊಳ್ಳುವ ಕಟ್ಟಡಗಳ ಗುಣಮಟ್ಟ ಸಮರ್ಪಕವಾಗಿರುವ ಬಗ್ಗೆ ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಜಿಲ್ಲಾ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ನಿಗಾವಹಿಸತಕ್ಕದ್ದು. ಹಣ ಬಳಕೆ ಪ್ರಮಾಣ ಪತ್ರವನ್ನು ಹಾಗೂ ಭೌತಿಕ ಪ್ರಗತಿಯ ವರದಿಯನ್ನು ತಪ್ಪದೆ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ಮತ್ತು ಅದರಡಿಯಲ್ಲಿನ ನಿಯಮಗಳನ್ನು ಚಾಚೂ ತಪ್ಪದೇ ಕಡ್ಡಾಯವಾಗಿ ಹಾಗೂ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅ.ಟಿ.ಸಂಖ್ಯೆ ಶಿಇ 755 ಐಎಫ್ (ಬಿಎ) 2005 ದಿನಾಂಕ: 17.10.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1536

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಸಹಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಮಂಚನಬೆಲೆ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು ರವರ ಪತ್ರ ಸಂ:ವ್ಯನಿ/ಕಾನೀನಿನಿ/ಮೈ/ ತಾಂತ್ರಿಕ/ನೀ.ಸಲಹಾ ಸಮಿತಿ/04-05/10689 ದಿ: 7.9.04.

**ಪ್ರಸ್ತಾವನೆ:**

ಮೇಲೆ ಓದಲಾದ ದಿ: 7.9.04ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಮೈಸೂರು ಇವರು ಮಂಚನಬೆಲೆ ಜಲಾಶಯ ಯೋಜನೆಗೆ ಸಂಬಂಧಿಸಿದ ನೀರಾವರಿ ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

2. ಈ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಜಸಂಇ 03 ಎಂಎಂಟಿ 04, ಬೆಂಗಳೂರು, ದಿನಾಂಕ: 14ನೇ ಜುಲೈ 2005**

ಮಂಚನಬೆಲೆ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನೊಳಗೊಂಡ ನೀರಾವರಿ ಸಲಹಾ ಸಮಿತಿಯನ್ನು ಮುಂದಿನ ಆದೇಶ ಹೊರಡಿಸುವವರೆಗೂ ಕೆಳಕಂಡಂತೆ ಪರಿಷ್ಕರಿಸಿ ಈ ಕೂಡಲೇ ಜಾರಿಗೆ ಬರುವಂತೆ ರಚಿಸಲಾಗಿದೆ.

**ಅಧ್ಯಕ್ಷರು:**

ಆಡಳಿತಾಧಿಕಾರಿಗಳು, ಕಾಡಾ, ಕಾವೇರಿ ಜಲಾನಯನ ಯೋಜನೆಗಳು, ಮೈಸೂರು.

**ಅಧಿಕಾರಿ ಸದಸ್ಯರು:**

1. ಅಧೀಕ್ಷಕ ಅಭಿಯಂತರರು, ಕೆ.ಆರ್.ಎಸ್. ಆಧುನೀಕರಣ ಮತ್ತು ಮಧ್ಯಮ ನೀರಾವರಿ ಯೋಜನಾ ವೃತ್ತ, ಮಂಡ್ಯ.
2. ಸಹಾಯಕ ಕೃಷಿ ನಿರ್ದೇಶಕರು, ರಾಮನಗರ ತಾಲ್ಲೂಕು.
3. ಸಹಾಯಕ ಕೃಷಿ ನಿರ್ದೇಶಕರು, ಮಾಗಡಿ ತಾಲ್ಲೂಕು.
4. ಕಾರ್ಯಪಾಲಕ ಇಂಜಿನಿಯರ್, ಮಂಚನಬೆಲೆ ಯೋಜನಾ ವಿಭಾಗ, ರಾಮನಗರಂ.

**ಅಧಿಕಾರೇತರ ಸದಸ್ಯರು:**

1. ಮಾನ್ಯ ಶ್ರೀ ಹೆಚ್.ಡಿ. ಕುಮಾರಸ್ವಾಮಿ, ವಿಧಾನ ಸಭಾ ಸದಸ್ಯರು, ರಾಮನಗರ ಕ್ಷೇತ್ರ.
2. ಮಾನ್ಯ ಶ್ರೀ ಹೆಚ್.ಸಿ. ಬಾಲಕೃಷ್ಣ, ವಿಧಾನ ಸಭಾ ಸದಸ್ಯರು, ಮಾಗಡಿ ಕ್ಷೇತ್ರ.
3. ಮಾನ್ಯ ಶ್ರೀ ಎಸ್. ರವಿ, ವಿಧಾನ ಪರಿಷತ್ ಸದಸ್ಯರು.

**ವಿಶೇಷ ಆಹ್ವಾನಿತರು:**

1. ಶ್ರೀಮತಿ ತೇಜಸ್ವಿನಿ ರಮೇಶ್, ಮಾನ್ಯ ಲೋಕಸಭಾ ಸದಸ್ಯರು, ಕನಕಪುರ ಕ್ಷೇತ್ರ.

ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 2 ಎಸ್‌ಆರ್‌ಎ 2000 ದಿ: 3.2.2001ರನ್ವಯ ನೀಡತಕ್ಕದ್ದು ಹಾಗೂ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮ ನಿಯಮಿತದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1539

**ಎ.ಎಲ್. ಜಗದೀಶ್**

ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3) ಜಲ ಸಂಪನ್ಮೂಲ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ದಿನಾಂಕ 2.10.2005 ರಿಂದ 15.10.2005 ರವರೆಗೆ 14 ದಿವಸಗಳ ಅವಧಿಯಲ್ಲಿ ಥೈಲ್ಯಾಂಡ್, ಮಲೇಷಿಯ ಮತ್ತು ಸಿಂಗಾಪುರಗಳಲ್ಲಿ "ಯೋಜನಾ ನಕ್ಷೆ ಮತ್ತು ನಿರ್ವಹಣೆ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಣ ಒದಗಿಸುವಿಕೆ ಮತ್ತು ಸೇವಾ ವಿಷಯಗಳ ಕುರಿತಾದ ಅಂತರರಾಷ್ಟ್ರೀಯ ಕಾರ್ಯಾಗಾರದಲ್ಲಿ ಭಾಗವಹಿಸಲು ಶ್ರೀ ಎಸ್. ರಾಜಣ್ಣ, ಕೆ.ಎಸ್.ಎಸ್. ಜಂಟಿ ನಿರ್ದೇಶಕರು (ನಿಯೋಜನೆ ಮೇಲೆ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ, ಬೆಂಗಳೂರು ಇವರನ್ನು ಕಳುಹಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಕ.ಕೊ.ನಿ.ಮ ಇವರ ಪತ್ರ ಸಂಖ್ಯೆ: ಕ.ಕೊ.ನಿ.ಮ:ಆಡಳಿತ:17 2005-06, ದಿ:6.9.2005.
2. ಉಪಮುಖ್ಯಸ್ಥರು (ಯೋಜನೆಗಳು) ಸ್ಥಳೀಯ ಮುಖ್ಯ ಕಾರ್ಯಾಲಯ, ಹುಡ್ಕೋ, ಬೆಂಗಳೂರು ರವರ ಪತ್ರ ಸಂಖ್ಯೆ: HUDCO/BRO/IHS/IESC/2005/752, ದಿನಾಂಕ: 28.7.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿರವರು ಭಾರತ ಸರ್ಕಾರದ ಭಾರತೀಯ ವಸತಿ ಮತ್ತು ಅಭಿವೃದ್ಧಿ ಸಂಸ್ಥೆ (ಐ.ಹೆಚ್.ಎಸ್. ಇಂಡಿಯ) ಇವರ ನಾಯಕತ್ವದಲ್ಲಿ ಆಯೋಜಿಸಿದ್ದು, ದಿನಾಂಕ: 2.10.2005 ರಿಂದ 15.10.05 ರವರೆಗೆ ಥೈಲ್ಯಾಂಡ್, ಮಲೇಷಿಯ ಮತ್ತು ಸಿಂಗಾಪುರಗಳಲ್ಲಿ "ಯೋಜನಾ ನಕ್ಷೆ ಮತ್ತು ನಿರ್ವಹಣೆ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಣ ಒದಗಿಸುವಿಕೆ ಮತ್ತು ಸೇವಾ ವಿಷಯಗಳ ಕುರಿತು ಕಾರ್ಯಾಗಾರದಲ್ಲಿ ಭಾಗವಹಿಸುವಂತೆ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಉಪ ಮುಖ್ಯಸ್ಥರು (ಯೋಜನೆಗಳು), ಹುಡ್ಕೋ, ಬೆಂಗಳೂರು ಇವರು ತಿಳಿಸಿರುತ್ತಾರೆ. ಈ ಕಾರ್ಯಾಗಾರದಲ್ಲಿ ಭಾಗವಹಿಸುವ ಪ್ರತಿನಿಧಿ ಶುಲ್ಕವನ್ನು ಮಂಡಳಿಯ ಪರವಾಗಿ ಹುಡ್ಕೋ ಸಂಸ್ಥೆಯಲ್ಲಿರುವ (ಆರ್ ಮತ್ತು ಡಿ) ಹಣದಲ್ಲಿ ಭರಿಸುವುದಾಗಿ ತಿಳಿಸಿರುತ್ತಾರೆ. ಈ ಕಾರ್ಯಾಗಾರಕ್ಕೆ ಭಾಗವಹಿಸುವ ಪ್ರತಿಯೋರ್ವ ಸ್ಪರ್ಧಿಯು 2950 EURO ಮೌಲ್ಯದ ಸ್ಪರ್ಧಾ ಶುಲ್ಕವನ್ನು ಪಾವತಿಸಬೇಕಾಗಿರುತ್ತದೆ. ಈ ಶುಲ್ಕವು ವಸತಿ, ಊಟ (ಉಪಹಾರ) ವೃತ್ತಿ ಶಿಕ್ಷಣ ಶುಲ್ಕ, ಶಿಕ್ಷಣ ಸಾಮಗ್ರಿಗಳು ಮತ್ತು ಸ್ಥಳೀಯ ವೀಕ್ಷಣೆ ಅವಕಾಶವನ್ನು ಒಳಗೊಂಡಿರುತ್ತದೆ. ಸದರಿ ಕಾರ್ಯಾಗಾರದಲ್ಲಿ ಭಾಗವಹಿಸಲು ಶ್ರೀ ಎಸ್. ರಾಜಣ್ಣ, ಕೆ.ಎಸ್.ಎಸ್. ಜಂಟಿ ನಿರ್ದೇಶಕರು, ಅಂಕಿ ಅಂಶಗಳ ಇಲಾಖೆ, ಬೆಂಗಳೂರುರವರು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ನಿಯೋಜನೆ ಮೇಲೆ ಜಂಟಿ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ರಾಜಣ್ಣ ಇವರಿಗೆ ಕಡತ ಸಂಖ್ಯೆ: ಸಿಆಸುಇ 33 ಇವಿತ 05ರ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ) ರವರು ಕಂಡಿಕೆ 18-23ರಲ್ಲಿ ಮತ್ತು ಕಂಡಿಕೆ 25 ರಲ್ಲಿ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆರವರು ಹಾಗೂ ಸರ್ಕಾರದ ಮುಖ್ಯ ಕಾರ್ಯದರ್ಶಿರವರು ಕಂಡಿಕೆ 24 ಮತ್ತು 26 ರಲ್ಲಿ ನೀಡಿರುವ ಹಿಂಬರಹಗಳಲ್ಲಿ ಸೂಕ್ತ ಕ್ರಮ ಕೈಗೊಳ್ಳುವಂತೆ ಆಡಳಿತ ಇಲಾಖೆಯಾದ ವಸತಿ ಇಲಾಖೆಗೆ ತಿಳಿಸಿರುವ ಹಿನ್ನೆಲೆಯಲ್ಲಿ ಪ್ರಸ್ತಾಪಿತ ಕಾರ್ಯಾಗಾರದಲ್ಲಿ ಭಾಗವಹಿಸಲು ಅನುಮತಿ ನೀಡಲು ತೀರ್ಮಾನಿಸಿದೆ.

ಸರ್ಕಾರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರಿ ಆದೇಶ ನಂ. ವಇ 103 ಕೊಮಂಇ 2005 (ಭಾ), ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ದಿನಾಂಕ: 2.10.2005 ರಿಂದ 15.10.05 ರವರೆಗೆ 14 ದಿವಸಗಳ ಅವಧಿಯಲ್ಲಿ ಥೈಲ್ಯಾಂಡ್, ಮಲೇಷಿಯ ಮತ್ತು ಸಿಂಗಾಪುರಗಳಲ್ಲಿ ಯೋಜನಾ ನಕ್ಷೆ ಮತ್ತು ನಿರ್ವಹಣೆ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಣ ಒದಗಿಸುವಿಕೆ ಮತ್ತು ಸೇವಾ ವಿಷಯಗಳ ಕುರಿತು ಕಾರ್ಯಾಗಾರಕ್ಕೆ ಶ್ರೀ ರಾಜಣ್ಣ, ಕೆ.ಎಸ್.ಎಸ್. ಜಂಟಿ ನಿರ್ದೇಶಕರು, ಅಂಕಿ ಅಂಶಗಳ ಇಲಾಖೆ, ಬೆಂಗಳೂರು ರವರು ನಿಯೋಜನೆ ಮೇಲೆ ಜಂಟಿ ನಿರ್ದೇಶಕರಾಗಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರನ್ನು ಸದರಿ ಕಾರ್ಯಾಗಾರಕ್ಕೆ ನಿಯೋಜಿಸಲು ಸರ್ಕಾರ ಮಂಜೂರಾತಿ ನೀಡಿದೆ.

ಈ ಕಾರ್ಯಾಗಾರದಲ್ಲಿ ಭಾಗವಹಿಸುವ ಪ್ರತಿನಿಧಿಯ ವೆಚ್ಚವನ್ನು ಹುಡ್ಕೋ ಸಂಸ್ಥೆಯು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ನಿಗದಿಪಡಿಸಿರುವ ಆರ್ ಮತ್ತು ಡಿ ನಿಧಿಯಿಂದ ಭರಿಸುವುದು.

ಈ ಪ್ರಸ್ತಾವನೆಗೆ ಮಾನ್ಯ ವಸತಿ ಸಚಿವರು ಹಾಗೂ ಕಡತ ಸಂಖ್ಯೆ: ಸಿಆಸುಇ 33 ಇವಿತ 2005ರ ಕಂಡಿಕೆ 26ರಲ್ಲಿ ಮಾನ್ಯ ಮುಖ್ಯ ಕಾರ್ಯದರ್ಶಿರವರು ನೀಡಿರುವ ಅನುಮೋದನೆಯಂತೆ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1540

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಡಿಆರ್‌ಡಿಎ ಆಡಳಿತ ಯೋಜನೆಯಡಿ ಬದಲಿ ವಾಹನ ಖರೀದಿಸುವ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ: ಆರ್ 20015-32-2004 ಡಿಆರ್‌ಡಿಎ ದಿನಾಂಕ 3.1.2005.
2. ಚಿಕ್ಕಮಗಳೂರು ಜಿಲ್ಲೆಯ ಪತ್ರದ ದಿನಾಂಕ: 4.3.2005, 5.5.2005 ಮತ್ತು 21.5.2005.
3. ಸರ್ಕಾರದ ಆದೇಶ ಸಮಸಂಖ್ಯೆ ದಿನಾಂಕ: 25.7.2005.
4. ಚಿಕ್ಕಮಗಳೂರು ಜಿಲ್ಲೆಯ ಪತ್ರದ ಸಂಖ್ಯೆ: ಜಿಪಂಚಿ/ಆ3/ವಾಹನ/74/2004-05/ ದಿನಾಂಕ: 29.8.2005.

**ಪ್ರಸ್ತಾವನೆ:**

ಚಿಕ್ಕಮಗಳೂರು ಜಿಲ್ಲಾ ಪಂಚಾಯತ್ ತನ್ನ ದಿನಾಂಕ:29.8.2005ರ ಪತ್ರದಲ್ಲಿ, ಬದಲಿ ಹೊಸ ವಾಹನವನ್ನು ಖರೀದಿಸಲು ರೂ. 4,12,366ಕ್ಕೆ ಸರ್ಕಾರವು ಅನುಮೋದನೆ ನೀಡಿದ್ದು ಇದರನ್ವಯ ಹೊಸ ಅಂಬಾಸೆಡರ್ ಕಾರು ಖರೀದಿಸುವ ಸಂದರ್ಭದಲ್ಲಿ ಅದಕ್ಕೆ ತಗಲಿದ ವೆಚ್ಚ ರೂ. 4,16,211 ಗಳಾಗಿದೆಯೆಂದು ತಿಳಿಸಿದೆ. ಸಾಗಾಣಿಕೆ ವೆಚ್ಚದಲ್ಲಿ ಆಗಿರುವ ವ್ಯತ್ಯಯದಿಂದ ವೆಚ್ಚ ಹೆಚ್ಚಾಗಿದ್ದು, ವ್ಯತ್ಯಾಸದ ಮೊತ್ತ ರೂ. 3845/-ಕ್ಕೆ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿದೆ. ಆದುದರಿಂದ ವ್ಯತ್ಯಾಸದ ಹಣ ರೂ. 3845ಕ್ಕೆ ಅನುಮೋದನೆ ನೀಡಬೇಕಾಗಿದೆ. ಆದಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 4 ಸ್ವಜಯೋ (ಡಿಆರ್‌ಡಿಎ) 2005, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರಾಜ್ಯ ಸರ್ಕಾರವು ಚಿಕ್ಕಮಗಳೂರು ಜಿಲ್ಲಾಪಂಚಾಯತಿಗೆ ಹೊಸ ಅಂಬಾಸೆಡರ್ ಕಾರು ಖರೀದಿಸಿದ ವ್ಯತ್ಯಾಸದ ಮೊಬಲಗಾದ ರೂ. 3845 (ರೂಪಾಯಿ ಮೂರು ಸಾವಿರದ ಎಂಟುನೂರಾ ನಲವತ್ತೈದು ರೂಪಾಯಿ ಮಾತ್ರ) ಕ್ಕೆ ಕೆಳಕಂಡ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

- ಡಿಆರ್‌ಡಿಎ ಆಡಳಿತ ಯೋಜನೆಯಡಿ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನದಿಂದ ಭರಿಸತಕ್ಕದ್ದು.
- ವೇತನಕ್ಕಾಗಿ ಖರ್ಚು ಮಾಡುವ ಗರಿಷ್ಠ ಶೇಕಡಾ 30 ರಷ್ಟರಲ್ಲಿ ಉಳಿತಾಯವಾಗುವ ಸಾದಿಲ್ವಾರು ವೆಚ್ಚದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಹಿರೇಮಣಿಯವರ್**
ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1541

## HOME SECRETARIAT

**CORRIGENDUM No. HD 51 PPE 2005, Bangalore, Dated 28th October 2005**

In the Government Order of even number dated 27th July 2005 the words "cases in S.C.No.570/2003, 580/2003, 423/2001 and 425/2001 on the file of the designated Court "appearing in the 9th line of the order portion shall be read as" all the bomb blast cases arising out of the following Crime numbers viz.,

1. Wadi P.S. Crime No. 77/2000
2. Keshawapur Hubli P.S. Crime No. 87/2000
3. Magadi Road Bangalore P.S. Crime No. 290/2000
4. J.J. Nagar, Bangalore P.S. Crime No. 113/2000"

The other contents of the order remain unchanged.

By Order and in the name of the Governor of Karnataka,
**R.A. KULAKARNI**
Under Secretary to Government,
Home Department (L & O & COFEPOSA & PRESECUTION

P.R. 1542

## ಒಳಾಡಳಿತ ಸಚಿವಾಲಯ

**ವಿಷಯ:** ಅಪರಾಧಿಕ ಪ್ರಕರಣಗಳಲ್ಲಿ ವಿಚಾರಣಾ ನ್ಯಾಯಾಲಯದ ತೀರ್ಪಿನ ನಿರ್ಣಯಗಳ ವಿರುದ್ಧ ಅಪೀಲು ದಾಖಲಿಸುವ : ದಾಖಲಿಸದಿರುವ ಬಗ್ಗೆ ನಿರ್ಣಯ ತೆಗೆದುಕೊಳ್ಳುವ ಅಧಿಕಾರಿಗಳ ಪ್ರತ್ಯಾಯೋಜನೆ 10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾಂತಹ ಪ್ರಕರಣಗಳಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರ ಪ್ರತ್ಯಾಯೋಜನೆ.

**ಓದಲಾಗಿದೆ:**
1. ಅಧಿಸೂಚನೆ ಸಂಖ್ಯೆ: ಡಿಸಿಎ 7 ಎಆರ್‌ಬಿ 2004, ದಿನಾಂಕ: 22.9.2004.
2. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 84 ಪಿಪಿಇ 2004, ದಿನಾಂಕ: 6.1.2005.
3. ಸುತ್ತೋಲೆ ಸಂಖ್ಯೆ: ಒಇ 86 ಪಿಪಿಇ 2004(ಎ) ದಿನಾಂಕ: 17.3.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 22.9.2004ರ ಅಧಿಸೂಚನೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಆಡಳಿತಾತ್ಮಕ ವಿಷಯಗಳನ್ನು ಒಳಗೊಂಡಂತೆ ಅಪರಾಧಿಕ ಅಭಿಯೋಜನೆಗೆ ಸಂಬಂಧಿಸಿದ ವಿಷಯವನ್ನು ಕಾನೂನು ಇಲಾಖೆಯಿಂದ ಒಳಾಡಳಿತ ಇಲಾಖೆಗೆ ವರ್ಗಾಯಿಸಲ್ಪಟ್ಟಿರುತ್ತದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ: 6.1.2005ರ ಸರ್ಕಾರಿ ಆದೇಶದಲ್ಲಿ ಅಪರಾಧಿಕ ಪ್ರಕರಣಗಳಲ್ಲಿ ವಿಚಾರಣಾ ನ್ಯಾಯಾಲಯದ ತೀರ್ಪಿನ ನಿರ್ಣಯಗಳ ವಿರುದ್ಧ ಅಪೀಲನ್ನು ದಾಖಲಿಸುವ ಅಥವಾ ಅಪೀಲನ್ನು ದಾಖಲಿಸದಿರುವ ಬಗ್ಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ. 10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದ ಪ್ರಕರಣಗಳಲ್ಲಿ ಸರ್ಕಾರವು ನಿರ್ಣಯ ತೆಗೆದುಕೊಳ್ಳುವುದು ಎಂದು ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ. ಮತ್ತು ಮೇಲೆ (3)ರಲ್ಲಿ ಓದಲಾಗಿರುವ ದಿನಾಂಕ: 17.3.2005ರ ಸುತ್ತೋಲೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು 10 ವರ್ಷಗಳಿಗಿಂತ ಹೆಚ್ಚಿನ ಶಿಕ್ಷೆಗೆ ಒಳಪಡುವಂತಹ ಪ್ರಕರಣಗಳ ತೀರ್ಪಿನ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ಅಂತಿಮ ನಿರ್ಣಯಕ್ಕಾಗಿ ಸರ್ಕಾರಕ್ಕೆ ಕಳುಹಿಸಿಕೊಡುವ ಬಗ್ಗೆ ಸೂಚನೆ ನೀಡಲಾಗಿದೆ.

10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಅಪೀಲು ದಾಖಲಿಸುವ ಅಥವಾ ದಾಖಲಿಸದಿರುವ ಬಗ್ಗೆ ಸರ್ಕಾರದ ಮಟ್ಟದಲ್ಲಿ ಒಳಾಡಳಿತ ಇಲಾಖೆಯ ಕಾರ್ಯದರ್ಶಿ (ಸೆರೆಮನೆ, ಅಪರಾಧ, ಸಹಾಯಕ ಸೇವೆಗಳು) ಯವರು ಈ ಅಧಿಕಾರವನ್ನು ಚಲಾಯಿಸುತ್ತಿರುತ್ತಾರೆ. ಈ ಅಧಿಕಾರ ಪ್ರತ್ಯಾಯೋಜನೆಗೆ ವಿದ್ಯುಕ್ತವಾದ ಆದೇಶವನ್ನು ಹೊರಡಿಸುವ ಅಗತ್ಯವು ಕಂಡುಬರುತ್ತದೆ. ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 86 ಪಿಪಿಇ 2004, ಬೆಂಗಳೂರು, ದಿನಾಂಕ: 24ನೇ ಅಕ್ಟೋಬರ್ 2005**

ಅಪರಾಧಿಕ ಪ್ರಕರಣಗಳಲ್ಲಿ 10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ವಿಚಾರಣಾ ನ್ಯಾಯಾಲಯದ ತೀರ್ಪಿನ : ನಿರ್ಣಯಗಳ ವಿರುದ್ಧ ಅಪೀಲನ್ನು ದಾಖಲಿಸುವ:ದಾಖಲಿಸದಿರುವ ಬಗ್ಗೆ ನಿರ್ಣಯವನ್ನು ತೆಗೆದುಕೊಳ್ಳುವ ಅಧಿಕಾರವನ್ನು ಒಳಾಡಳಿತ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಸೆರೆಮನೆ : ಅಪರಾಧಗಳು ಮತ್ತು ಸಹಾಯಕ ಸೇವೆಗಳು) ಇವರು ಸಕ್ಷಮ ಪ್ರಾಧಿಕಾರಿ ಆಗಿರುತ್ತಾರೆಂದು ಈ ಮೂಲಕ ಆದೇಶಿಸಲಾಗಿದೆ.

ಪ್ರತ್ಯಾಯೋಜಿಸಲಾದ ಮೇಲಿನ ಅಧಿಕಾರವು ಒಳಾಡಳಿತ ಇಲಾಖೆಯ ಪ್ರಧಾನ ಕಾರ್ಯದರ್ಶಿ ಮತ್ತು ಒಳಾಡಳಿತ ಇಲಾಖೆ ವಿಭಾಗದ ಪ್ರಭಾರವನ್ನು ಹೊಂದಿರುವ ಸಚಿವರ ಪುನರಾವಲೋಕನೆಗೆ ಒಳಪಟ್ಟಿರುತ್ತದೆ.

10 ವರ್ಷಕ್ಕೂ ಮೀರಿದ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಅಪರಾಧಿಕ ಪ್ರಕರಣಗಳಲ್ಲಿ ಅಪೀಲನ್ನು ದಾಖಲಿಸುವ:ದಾಖಲಿಸದಿರುವ ಬಗ್ಗೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ಪ್ರಸ್ತಾವನೆಗಳನ್ನು ಒಳಾಡಳಿತ ಇಲಾಖೆಯ ಸಂದರ್ಭಾನುಸಾರ ಹೆಚ್‌ಸಿಪಿ-1 ಅಥವಾ ಹೆಚ್‌ಸಿಪಿ-2 ಶಾಖೆಗೆ ಕಳುಹಿಸಿಕೊಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಪಿ.ಆರ್. 1543 ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ ಮತ್ತು ಸು ಮತ್ತು ಕಾಫಿಪೋಸ್ ಮತ್ತು ಅಭಿಯೋಗ)

**ತಿದ್ದುಪಡಿ ಸಂಖ್ಯೆ: ಒಇ 602 ಪಿಪಿಇ 2005, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2005**

ಸಮಸಂಖ್ಯೆಯ ಆದೇಶ ದಿನಾಂಕ: 14.10.05ರಲ್ಲಿ 'ಗದಗ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ' ಎಂದಿರುವುದನ್ನು 'ದಾಂಡೇಲಿ ಜೆಎಂಎಫ್‌ಸಿ ನ್ಯಾಯಾಲಯ' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದರ ಹೊರತಾಗಿ ಸದರಿ ಆದೇಶದಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಪಿ.ಆರ್. 1544 ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ ಮತ್ತು ಸು ಮತ್ತು ಕಾಫಿಪೋಸ್ ಮತ್ತು ಅಭಿಯೋಗ)

## ಕಾರ್ಮಿಕ ಸಚಿವಾಲಯ

**ವಿಷಯ:** ಉಡುಪಿ ತಾಲ್ಲೂಕಿನಲ್ಲಿ ಕಾರ್ಮಿಕ ನಿರೀಕ್ಷಕರ 2ನೇ ವೃತ್ತದ ಸೃಜನೆಯ ಬಗ್ಗೆ.
**ಓದಲಾಗಿದೆ:** ಕಾರ್ಮಿಕ ಆಯುಕ್ತರ ಪತ್ರ ಸಂ:ಎನ್‌ಜಿಓ-1/ಸಿಆರ್-8/2004-05 ದಿನಾಂಕ: 7/4.6.2004.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಈ ಕೆಳಕಂಡಂತೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ದಕ್ಷಿಣ ಕನ್ನಡ ಜಿಲ್ಲೆಯು ವಿಭಜನೆಯಾಗಿ ಉಡುಪಿ ಜಿಲ್ಲೆ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಾಗಿ ವಿಂಗಡನೆಯಾಗಿರುತ್ತದೆ. ಈ ವಿಂಗಡಣೆ ಪೂರ್ವದಲ್ಲಿ ಉಡುಪಿ ತಾಲ್ಲೂಕಿನಲ್ಲಿ ಕಾರ್ಮಿಕ ನಿರೀಕ್ಷಕರ 1 ವೃತ್ತ ಇತ್ತೆಂದೂ, ಈಗ ಈ ವಿಭಜನೆಯಿಂದಾಗಿ ಉಡುಪಿ ತಾಲ್ಲೂಕು ಜೊತೆಗೆ ಕುಂದಾಪುರ ಮತ್ತು ಕಾರ್ಕಳ ತಾಲ್ಲೂಕುಗಳನ್ನು ಸೇರಿಸಿ ಉಡುಪಿ ಜಿಲ್ಲೆ ರಚನೆಗೊಂಡಿರುವ ಕಾರಣ, ಉಡುಪಿ ಜಿಲ್ಲೆಯಲ್ಲಿ ಐದು ಸಾವಿರಕ್ಕೂ ಹೆಚ್ಚು ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳು, ಆಸ್ಪತ್ರೆ ಮತ್ತು ನರ್ಸಿಂಗ್ ಹೋಂಗಳು, 50ಕ್ಕೂ ಹೆಚ್ಚು ಮೋಟಾರ್ ಸಾರಿಗೆ ಸಂಸ್ಥೆಗಳು, 105ಕ್ಕೂ ಹೆಚ್ಚು ಕೈಗಾರಿಕಾ ಸಂಸ್ಥೆಗಳು, 57588 ಬೀಡಿ ಕಾರ್ಮಿಕರು ಇರುತ್ತಾರೆ. ಈ ತಾಲ್ಲೂಕಿನಲ್ಲಿ ಟೈಲ್ಸ್ ಮತ್ತು ಕ್ಯಾಶ್ಯೂ ಉದ್ದಿಮೆಗಳು ಇವೆಯೆಂದು, ಉಡುಪಿ ನಗರವು ಬೃಹದಾಕಾರವಾಗಿ ಬೆಳೆದಿದ್ದು, ಸಾಕಷ್ಟು ಪ್ರಮಾಣದಲ್ಲಿ ಬೆಳೆಯುವ ಲಕ್ಷಣಗಳು ಕಂಡುಬರುತ್ತಿವೆಯೆಂದು, ಹೊಸದಾದ ಕೈಗಾರಿಕೆಗಳು ಪ್ರಾರಂಭವಾಗುವ ಲಕ್ಷಣಗಳು ಇವೆಯೆಂದು, ಆದುದರಿಂದ ಉಡುಪಿ ಜಿಲ್ಲೆಯಲ್ಲಿ ಕಾರ್ಮಿಕ ನಿರೀಕ್ಷಕರ 2ನೇ ವೃತ್ತವನ್ನು ಸೃಜಿಸಬಹುದೆಂದೂ ಕಾರ್ಮಿಕ ಆಯುಕ್ತರು ತಿಳಿಸಿರುತ್ತಾರೆ.

2ನೇ ವೃತ್ತಕ್ಕೆ ಕಾರ್ಮಿಕ ನಿರೀಕ್ಷಕರ ಹುದ್ದೆಯನ್ನು ತುಂಬುವ ಬಗ್ಗೆ ಕಾರ್ಮಿಕ ಆಯುಕ್ತರು ನೀಡಿರುವ ಸಲಹೆ ಈ ಕೆಳಕಾಣಿಸಿದಂತೆ ಇದೆ.

"ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇಲ್ಲಿ 2 ಬಾಲ ಕಾರ್ಮಿಕ ನಿರೀಕ್ಷಕರ ಹುದ್ದೆಗಳು ಯೋಜನೆ ಅಡಿಯಲ್ಲಿ ಮಂಜೂರಾಗಿದ್ದು, ಜಿಲ್ಲೆಯಲ್ಲಿ ಬಾಲ ಕಾರ್ಮಿಕರ ಸಂಖ್ಯೆ ತುಂಬಾ ವಿರಳವಾಗಿರುವುದರಿಂದ ಹಾಗೂ ಬಾಲ ಕಾರ್ಮಿಕ ನಿರೀಕ್ಷಕರ ಕೆಲಸದ ಒತ್ತಡ ಕಡಿಮೆ ಇರುವುದರಿಂದ, ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿಗೆ 2 ಬಾಲ ಕಾರ್ಮಿಕ ನಿರೀಕ್ಷಕರ ಹುದ್ದೆಯ ಅವಶ್ಯಕತೆ ಇರುವುದಿಲ್ಲ. ಇದರಲ್ಲಿ ಒಂದು ಹುದ್ದೆಯನ್ನು ಕಾರ್ಮಿಕ ನಿರೀಕ್ಷಕರ ಹುದ್ದೆಯನ್ನಾಗಿ ಪದನಾಮ ಬದಲಾವಣೆ ಮಾಡಿ, ಕಾರ್ಮಿಕ ನಿರೀಕ್ಷಕರು, 2ನೇ ವೃತ್ತ, ಉಡುಪಿ ಎನ್ನುವುದಾಗಿ ವರ್ಗಾಯಿಸಬಹುದಾಗಿರುತ್ತದೆ. ಇದು ಹೊಸದಾಗಿ ಹುದ್ದೆಯ ಸೃಜನೆಯಾಗಿಲ್ಲದೆ ಇರುವುದರಿಂದ ಈಗಾಗಲೇ ಮಂಜೂರಾದ ಹುದ್ದೆಗಳ ಮರು ಹೊಂದಾಣಿಕೆ (redeployment) ಆಗಿರುವುದರಿಂದ, ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆ ಇರುವುದಿಲ್ಲ."

ಕಾರ್ಮಿಕ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶದ ಸಂಖ್ಯೆ: ಕಾಇ 209 ಎಲ್‌ಇಟಿ 2005, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2005**

ಉಡುಪಿ ಜಿಲ್ಲೆಯಲ್ಲಿ ಕಾರ್ಮಿಕ ನಿರೀಕ್ಷಕರ ಒಂದು ವೃತ್ತ ಇದ್ದು, ಸದರಿ ಜಿಲ್ಲೆಯಲ್ಲಿ ಕಾರ್ಮಿಕ ನಿರೀಕ್ಷಕರ ಇನ್ನೊಂದು ವೃತ್ತವನ್ನು (2ನೇ ವೃತ್ತ) ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಈ 2ನೇ ವೃತ್ತಕ್ಕೆ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇಲ್ಲಿ ಇರುವ 2 ಬಾಲ ಕಾರ್ಮಿಕ ನಿರೀಕ್ಷಕರ ಹುದ್ದೆಯಲ್ಲಿ, ಒಂದು ಹುದ್ದೆಯನ್ನು ಕಾರ್ಮಿಕ ನಿರೀಕ್ಷಕರು ಎಂಬುದಾಗಿ ಬದಲಾವಣೆ ಮಾಡಿ, ಸದರಿ ಹುದ್ದೆಯನ್ನು ಕಾರ್ಮಿಕ ನಿರೀಕ್ಷಕರು, 2ನೇ ವೃತ್ತ, ಉಡುಪಿ ಜಿಲ್ಲೆ ಎನ್ನುವುದಾಗಿ ಪದನಾಮೀಕರಿಸಿ ಮರು ಹೊಂದಾಣಿಕೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1545 **ವಿಮಲಾ ಕುಮಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಫ್.ಆರ್. ಸಂಬರಗಿ, ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್. ಶಿವಶಂಕರ್, ಹಿರಿಯ ಸಹಾಯಕ ಅವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 18 ಎಸ್‌ಇಎನ್ 2005 ದಿನಾಂಕ: 15.6.2005.
2. ಶ್ರೀ ಎಫ್.ಆರ್. ಸಂಬರಗಿ, ಅಧೀನ ಕಾರ್ಯದರ್ಶಿ ಅವರ ದಿನಾಂಕ: 12.7.2005ರ ಲಿಖಿತ ಉತ್ತರ.
3. ಶ್ರೀ ಬಿ.ಎನ್. ಶಿವಶಂಕರ್, ಹಿರಿಯ ಸಹಾಯಕ ಅವರ ದಿನಾಂಕ 12.7.2005ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಎಫ್.ಆರ್. ಸಂಬರಗಿ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯದ ಶಿಕ್ಷಣ ಇಲಾಖೆಯ ಸೇವೆಗಳು-1,2 ಶಾಖೆಗಳ ಅಧೀನ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸೇವೆಗಳು-1 ಶಾಖೆಯಲ್ಲಿ ಹಿರಿಯ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ.ಎನ್. ಶಿವಶಂಕರ್, ಅವರೊಂದಿಗೆ ಶಾಮೀಲಾಗಿ ಮೇಲಾಧಿಕಾರಿಗಳ ಯಾವುದೇ ಆದೇಶವಿಲ್ಲದೆ ಶ್ರೀ ಜೆ. ರಾಜು, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢ ಶಾಲೆ, ಕೆ. ಬೆಳತ್ತೂರು, ಹೆಗ್ಗಡದೇವನಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ ಅವರನ್ನು ಖೊಟ್ಟಿ/ಬೋಗಸ್ ವರ್ಗಾವಣೆ ಆದೇಶ/ಅಧಿಸೂಚನೆ ಸಂಖ್ಯೆ:ಇಡಿ 432 ಎಸ್-ವರ್ಗ 2004 ದಿನಾಂಕ: 23.11.2004ನ್ನು ಸೃಷ್ಟಿಸಿ ಅದರ ಮೂಲಕ ಮೈಸೂರಿನ ಪ್ರ-ಶಿಕ್ಷಣ ಸಂಸ್ಥೆ (ಟಿಟಿಐ)ಯಲ್ಲಿನ ಬಡ್ತಿಯಿಂದ ಖಾಲಿಯಾದ ಅಧೀಕ್ಷಕರ ಹುದ್ದೆಗೆ ವರ್ಗಾಯಿಸಲು ಪ್ರಯತ್ನಿಸಿದ ಆರೋಪಗಳಿಗಾಗಿ ಶ್ರೀ ಎಫ್.ಆರ್. ಸಂಬರಗಿ, ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಬಿ.ಎನ್. ಶಿವಶಂಕರ್, ಹಿರಿಯ ಸಹಾಯಕ ಇವರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 15.6.2005ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಸಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2) ಮತ್ತು (3)ರಲ್ಲಿ ಓದಲಾದ ದಿನಾಂಕ:12.7.2005ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಟಿ.ಎಸ್. ಪಾಲನೇತ್ರ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 2005 ದಿನಾಂಕ: 23.8.2005 ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀಮತಿ ಸ್ವರ್ಣಲತ ಎಂ. ಭಂಡಾರೆ, ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2) ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಸರ್ಕಾರದ ಕಾರ್ಯದರ್ಶಿ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) ರವರು ಕ್ರಮಕೈಗೊಳ್ಳುತ್ತಾರೆ. ವಿಚಾರಣಾಧಿಕಾರಿಯವರು ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1546

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಆರ್ಥಿಕ ಇಲಾಖೆಯ ಲೋಕೋಪಯೋಗಿ ಆರ್ಥಿಕ ಕೋಶದ ಸಂಗ್ರಹಣಾ ಕೋಶವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 39 ಸಸಿವಿ 2002 ದಿನಾಂಕ: 16.7.2003.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 71 ಸಸಿವಿ 2004 ದಿನಾಂಕ: 24.9.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 16.7.2003ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಲೋಕೋಪಯೋಗಿ ಆರ್ಥಿಕ ಕೋಶದಲ್ಲಿ ಸಂಗ್ರಹಣ ಕೋಶವನ್ನು ದಿನಾಂಕ: 16.7.2003 ರಿಂದ ಈ ಕೆಳಕಂಡ ಸಿಬ್ಬಂದಿಯನ್ನೊಳಗೊಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಿ ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಉಪ ಕಾರ್ಯದರ್ಶಿ | 1 ಹುದ್ದೆ |
| 2. | ಶೀಘ್ರಲಿಪಿಗಾರ | 1 ಹುದ್ದೆ |
| 3. | ಕಿರಿಯ ಸಹಾಯಕ | 1 ಹುದ್ದೆ |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 24.9.2004ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಲೋಕೋಪಯೋಗಿ ಆರ್ಥಿಕ ಕೋಶದಲ್ಲಿನ ಸಂಗ್ರಹಣಾ ಕೋಶವನ್ನು ದಿನಾಂಕ: 16.7.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ಪ್ರಸ್ತುತ ಈ ಕೋಶದ ಕಾಲಾವಧಿಯು ದಿನಾಂಕ: 16.7.2005ಕ್ಕೆ ಮುಕ್ತಾಯಗೊಂಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 66 ಸಸಿವಿ 2005, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2005**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಆರ್ಥಿಕ ಇಲಾಖೆಯಲ್ಲಿನ ಲೋಕೋಪಯೋಗಿ ಆರ್ಥಿಕ ಕೋಶದಲ್ಲಿ ಸಂಗ್ರಹಣಾ ಕೋಶವನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 16.7.2005 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಉಪ ಕಾರ್ಯದರ್ಶಿ | 1 ಹುದ್ದೆ |
| 2. | ಶೀಘ್ರಲಿಪಿಗಾರ | 1 ಹುದ್ದೆ |
| 3. | ಕಿರಿಯ ಸಹಾಯಕ | 1 ಹುದ್ದೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಅನುಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1547

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಧಾರವಾಡ ಜಿಲ್ಲೆಯ ಹಾನಗಲ್ ತಾಲ್ಲೂಕಿನ 1995-96ನೇ ಸಾಲಿನಲ್ಲಿ ಹನಿ ನೀರಾವರಿ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿ ನಡೆದಿರುವ ಅವ್ಯವಹಾರದ ಬಗ್ಗೆ.

**ಓದಲಾಗಿದೆ:**

1. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂಖ್ಯೆ:ತೋಇ:ಆ:ಸಿ:10-2/52/96-97, ದಿನಾಂಕ: 8.1.1997.
2. ಸರ್ಕಾರದ ಪತ್ರ ಸಂಖ್ಯೆ:ಕೃತೋಇ 159 ತೋಸೇಪ 96 ದಿನಾಂಕ:31.1.1997.
3. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ಸಂಖ್ಯೆ:ತೋಇ:ಆ:ಸಿ:10-2/52/96-97 ದಿನಾಂಕ:22.5.1997.
4. ಸರ್ಕಾರದ ಆದೇಶ ಸಂ: ಒಇ 126 ಸಿಓಡಿ 97 ದಿನಾಂಕ:20.8.1997
5. ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ಸಿಓಡಿ, ಬೆಂಗಳೂರು ಇವರು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ ಇವರಿಗೆ ಬರೆದಿರುವ ತನಿಖಾ ವರದಿ ದಿನಾಂಕ: 8.9.1999.
6. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ದಿನಾಂಕ:7.5.2003.
7. ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರ ಪತ್ರದ ದಿನಾಂಕ:14.3.2005.

**ಪ್ರಸ್ತಾವನೆ:**

ಧಾರವಾಡ ಜಿಲ್ಲೆ ಹಾನಗಲ್ ತಾಲ್ಲೂಕಿನಲ್ಲಿ 1995-96ನೇ ಸಾಲಿನ ಹನಿ ನೀರಾವರಿ ಯೋಜನೆಯಡಿಯಲ್ಲಿ ಆಗಿನ ತೋಟಗಾರಿಕೆ ಉಪ ನಿರ್ದೇಶಕರಾಗಿದ್ದ ಶ್ರೀ ಎ. ನಾರಾಯಣಸ್ವಾಮಿ ಹಾಗೂ ಶ್ರೀ ಎ.ಸಿ. ಶಿವರುದ್ರಯ್ಯ, ಸಹಾಯಕ ತೋಟಗಾರಿಕೆ ಅಧಿಕಾರಿ, ಪ್ರಭಾರೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ) ಹಾನಗಲ್ ಇವರ ವಿರುದ್ಧ ಮಾಡಲಾದ ಅವ್ಯವಹಾರ ಆರೋಪಗಳ ಬಗ್ಗೆ ತನಿಖೆಗಾಗಿ ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ), ಲಾಲ್‌ಬಾಗ್, ಬೆಂಗಳೂರು ಇವರನ್ನು ನಿಯೋಜಿಸಲಾಗಿತ್ತು. ತನಿಖಾ ವರದಿಯನ್ನು ತೋಟಗಾರಿಕೆ ಜಂಟಿ ನಿರ್ದೇಶಕರು (ಅಭಿವೃದ್ಧಿ) ಇವರು ಸಲ್ಲಿಸಿದ್ದು, ಅನೇಕ ರೈತರ ತಾಕುಗಳಲ್ಲಿ ಹನಿ ನೀರಾವರಿ ಉಪಕರಣಗಳನ್ನು ಅಳವಡಿಸದಿದ್ದರೂ ಸಹಾಯ ಧನ ಮಂಜೂರು ಮಾಡಿರುವುದು ಮತ್ತು ಹಲವಾರು ಪ್ರಕರಣಗಳಲ್ಲಿ ಫಲಾನುಭವಿಗಳ ತಾಕುಗಳಲ್ಲಿರುವ ಬೆಳೆಯೇ ಬೇರೆಯಾಗಿದ್ದು ಪ್ರಸ್ತಾವನೆಯಲ್ಲಿ ತೋರಿಸಿದ ಬೆಳೆಯೇ ಬೇರೆಯಾಗಿರುತ್ತದೆ. ಅಲ್ಲದೇ ಬೆಳೆಯ ವಿಸ್ತೀರ್ಣ ಕಡಿಮೆ ಇದ್ದರೂ ಸಹ ಹೆಚ್ಚು ಸಹಾಯ ಧನ ಮಂಜೂರು ಮಾಡಿರುವುದು ತನಿಖಾ ವರದಿಯಿಂದ ವ್ಯಕ್ತವಾಗಿದೆ. ಸದರಿ ಅಧಿಕಾರಿಗಳು ಯೋಜನೆಯ ಮಾರ್ಗಸೂಚಿಗಳನ್ನು ಸಂಪೂರ್ಣ ಉಲ್ಲಂಘಿಸಿರುತ್ತಾರೆ. ಈ ಬಗ್ಗೆ ಸದರಿ ಅಧಿಕಾರಿಗಳಿಗೆ ಆರೋಪ ಪಟ್ಟಿಯನ್ನು ಮೇಲೆ ಓದಲಾದ (2)ರ ಪತ್ರದಲ್ಲಿ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿತ್ತು. ಈ ಆರೋಪಗಳನ್ನು ಸದರಿ ಅಧಿಕಾರಿಗಳು ಅಲ್ಲಗಳೆದಿದ್ದಾರೆ. ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣಾಧಿಕಾರಿ:ಮಂಡನಾಧಿಕಾರಿಯವರನ್ನು ನೇಮಕ ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ತೋಟಗಾರಿಕಾ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರು ಕೋರಿದ್ದಾರೆ.

ಮೇಲೆ ಓದಲಾದ (4)ರ ಸರ್ಕಾರಿ ಆದೇಶದಲ್ಲಿ ಸದರಿ ಪ್ರಕರಣದಲ್ಲಿ ಹಣ ದುರುಪಯೋಗದ ಬಗ್ಗೆ ಸಿಓಡಿ ತನಿಖೆ ನಡೆಸುವಂತೆ ಆದೇಶಿಸಿದೆ. ಮೇಲೆ ಓದಲಾದ (5)ರ ಡೈರೆಕ್ಟರ್ ಜನರಲ್ ಆಫ್ ಪೊಲೀಸ್, ಸಿಓಡಿ, ಬೆಂಗಳೂರು ಇವರಿಂದ ಬಂದಿರುವ ತನಿಖಾ ವರದಿಯಲ್ಲಿ 7 ಜನ ರೈತರುಗಳು 3 ಕಂಪನಿ ಮಾಲೀಕರು ಮತ್ತು ಕೃಷಿ ಅಧಿಕಾರಿಗಳು ಒಟ್ಟಿಗೆ ಸೇರಿ ಸರ್ಕಾರದಿಂದ ಬಿಡುಗಡೆಯಾಗಿರುವ ರೂ. 1,46,650-00ಗಳನ್ನು ದುರುಪಯೋಗಪಡಿಸಿಕೊಂಡಿರುವುದು ತನಿಖೆಯಿಂದ ತಿಳಿದು ಬರುತ್ತದೆ ಎಂದು ತಿಳಿಸಿ, ಇವರುಗಳ ವಿರುದ್ಧ ಸಂಬಂಧಪಟ್ಟ ಪೊಲೀಸ್ ಠಾಣೆಯಲ್ಲಿ ಕ್ರಮ ಜರುಗಿಸುವಂತೆ ತಿಳಿಸಿದ್ದಾರೆ. ಹೀಗಾಗಿ ಹಾನಗಲ್ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಾಗಿರುತ್ತದೆ. ಎಂದು ಮೇಲೆ ಓದಲಾದ (6)ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ತಿಳಿಸಿದ್ದಾರೆ.

ಮೇಲೆ ಓದಲಾದ (7)ರ ತೋಟಗಾರಿಕೆ ನಿರ್ದೇಶಕರವರ ಪತ್ರದಲ್ಲಿ ಪ್ರಕರಣ ವಿಚಾರಣಾ ಹಂತದಲ್ಲಿರುವುದಾಗಿಯೂ, ಅಲ್ಲದೇ ಪ್ರಕರಣದ ಆರೋಪಿತ ಅಧಿಕಾರಿಗಳಾದ ಶ್ರೀ ಎ. ನಾರಾಯಣಸ್ವಾಮಿ, ತೋಟಗಾರಿಕೆ ಉಪ ನಿರ್ದೇಶಕರು ಮತ್ತು ಶ್ರೀ ಎ.ಸಿ. ಶಿವರುದ್ರಯ್ಯ, ಸಹಾಯಕ ತೋಟಗಾರಿಕೆ ಅಧಿಕಾರಿ ಇವರುಗಳಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿದ್ದು ದೋಷಾರೋಪಣಾ ಪಟ್ಟಿಗೆ ತೋಟಗಾರಿಕೆ ಉಪ ನಿರ್ದೇಶಕರು ಪ್ರತಿ ರಕ್ಷಣಾ ಹೇಳಿಕೆಯನ್ನು ನೀಡಿರುತ್ತಾರೆ. ಆದರೆ ಸಹಾಯಕ ತೋಟಗಾರಿಕೆ ಅಧಿಕಾರಿಯವರು ಇಲ್ಲಿಯವರೆವಿಗೂ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಹೀಗಾಗಿ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ವಿಚಾರಣಾಧಿಕಾರಿ: ಮಂಡನಾಧಿಕಾರಿಯವರನ್ನು ನೇಮಕಾತಿ ಮಾಡುವಂತೆ ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ:ಕೃತೋಇ 159 ತೋಸೇಪ 1996, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್ 2005**

ಶ್ರೀ ಎ. ನಾರಾಯಣಸ್ವಾಮಿ, ತೋಟಗಾರಿಕೆ ಉಪ ನಿರ್ದೇಶಕರು ಮತ್ತು ಶ್ರೀ ಎ.ಸಿ. ಶಿವರುದ್ರಯ್ಯ, ಸಹಾಯಕ ತೋಟಗಾರಿಕೆ ಅಧಿಕಾರಿ ಇವರುಗಳು ಈ ಹಿಂದೆ ಧಾರವಾಡ ಜಿಲ್ಲೆ ಹಾನಗಲ್ ತಾಲ್ಲೂಕಿನಲ್ಲಿ 1995-96ನೇ ಸಾಲಿನ ಹನಿ ನೀರಾವರಿ ಯೋಜನೆಯಡಿಯಲ್ಲಿ ಅವ್ಯವಹಾರ ನಡೆದಿದ್ದು ಈ ಬಗ್ಗೆ ಮಾಡಲಾದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ

ಮತ್ತು ಮೇಲ್ಮನವಿ) ನಿಯಮಗಳು 11ನೇ ನಿಯಮದ 2ನೇ ಉಪ ನಿಯಮ ಮತ್ತು 3ನೇ ಉಪ ನಿಯಮದ (ಸಿ) ಖಂಡದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಎಂ.ಎಸ್. ನಟರಾಜಮೂರ್ತಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ವಿವೇಕ್, ಸಹಾಯಕ ತೋಟಗಾರಿಕೆ ಅಧಿಕಾರಿ, ಲಾಲ್‌ಬಾಗ್, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ನಡೆಸಿ ಮೂರು ತಿಂಗಳೊಳಗಾಗಿ ಪೂರೈಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೆಯೇ ಸಂಬಂಧಿಸಿದ ಕಚೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ:ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖಿನ ಸಾಮಗ್ರಿಗಳನ್ನು ಒದಗಿಸುವುದು. ಈ ಪ್ರಕರಣದ ವಿಚಾರಣೆಗಾಗಿ ರೂ. 6000-00 (ರೂ. ಆರು ಸಾವಿರ ಮಾತ್ರ) ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು 3 ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಪಿ.ಆರ್. 1436

ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಜಿಲ್ಲಾ ಮಟ್ಟದ ಸಮಿತಿಗಳ ಅಧ್ಯಕ್ಷರಾಗಿ ಜಿಲ್ಲಾಧಿಕಾರಿಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 28.11.2004 ರಂದು ನಡೆದ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಸಮ್ಮೇಳನದ ನಡವಳಿಗಳು.
2. ಸರ್ಕಾರದ ಆದೇಶ ಸಂಖ್ಯೆ:ಕಂಇ 511 ಬಿಎಂಎಂ 2004 ದಿನಾಂಕ: 4.1.2005.

**ಪ್ರಸ್ತಾವನೆ:**

ದಿನಾಂಕ: 28.11.2004 ರಂದು ನಡೆದ ಜಿಲ್ಲಾಧಿಕಾರಿಗಳು ಮತ್ತು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಸಮ್ಮೇಳನದಲ್ಲಿ ನಿರ್ಣಯಿಸಿದಂತೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಇರುವ 37 ಸಮಿತಿಗಳನ್ನು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ವರ್ಗಾಯಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆದೇಶಿಸಲಾಗಿದೆ. ಈ ಮಧ್ಯೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಸಮಾಜ ಕಲ್ಯಾಣ ಇಲಾಖೆ ಹಾಗೂ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳು ಆಕ್ಷೇಪಣೆಗಳನ್ನು ವ್ಯಕ್ತಪಡಿಸಿ ಆ ಇಲಾಖೆಗಳಿಗೆ ಸಂಬಂಧಿಸಿದ ಈ ಕೆಳಕಾಣಿಸಿದ 4 ಸಮಿತಿಗಳನ್ನು

1. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸಂಬಂಧಿಸಿದ-
   (i) ಜಿಲ್ಲಾ ಆರೋಗ್ಯ ರಕ್ಷಾ ಸಮಿತಿ;
   (ii) (HIV) ಏಡ್ಸ್ ತಡೆಗಟ್ಟುವ ಕಾರ್ಯಕ್ರಮಗಳ ಅನುಷ್ಠಾನ ಜಿಲ್ಲಾ ಮಟ್ಟದ ಸಮಿತಿ;
2. ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದ-
   (iii) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಕ್ಷೇಮಾಭಿವೃದ್ಧಿ ಯೋಜನೆ;
3. ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಗೆ ಸಂಬಂಧಿಸಿದ-
   (iv) ಏಕ ಗವಾಕ್ಷಿ ಯೋಜನೆ/ PMRY ಯೋಜನೆ/ ವಿಶ್ವಯೋಜನೆ.

ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲೇ ಮುಂದುವರೆಸಿಕೊಂಡು ಹೋಗಲು ಕಂದಾಯ ಇಲಾಖೆಯನ್ನು ಒತ್ತಾಯಿಸಿವೆ. ಈ ಇಲಾಖೆಗಳು ತಿಳಿಸಿರುವ ವಿಷಯಗಳು ಗಂಭೀರ ಸ್ವರೂಪದವುಗಳಾಗಿದ್ದು, ಅವುಗಳು ಜಿಲ್ಲಾ ಪಂಚಾಯಿತಿಗೆ ಸಂಬಂಧಿಸಿದ್ದರೂ ಕೂಡ ಆ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಜಿಲ್ಲಾಧಿಕಾರಿಗಳು, ಪೊಲೀಸ್ ಅಧಿಕಾರಿಗಳು ಒಳಗೊಂಡಿರುವುದರಿಂದ ಆ ಸಮಿತಿಗಳನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಮುಂದುವರೆಸುವುದು ಸೂಕ್ತವೆಂದು ಕಂಡು ಬಂದಿದೆ. ಆದ್ದರಿಂದ ಈ ಕೆಳಗೆ ಕಾಣಿಸಿರುವ 4 ಸಮಿತಿಗಳ ಅಧ್ಯಕ್ಷತೆಯನ್ನು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಂದ ಹಿಂದಕ್ಕೆ ಪಡೆದು ಜಿಲ್ಲಾಧಿಕಾರಿಗಳಿಗೆ ವಹಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ ಕಂಇ 511 ಬಿಎಂಎಂ 2004, ಬೆಂಗಳೂರು, ದಿನಾಂಕ: 9ನೇ ಸೆಪ್ಟೆಂಬರ್ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರದ ಆದೇಶ ಸಂಖ್ಯೆ:ಕಂಇ 511 ಬಿಎಂಎಂ 2004 ದಿನಾಂಕ: 4.1.2005 ನ್ನು ಭಾಗಶ: ಮಾರ್ಪಡಿಸಿ ಈ ಕೆಳಕಾಣಿಸಿದ 4 ಸಮಿತಿಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಮುಂದುವರೆಸಿ ಆದೇಶಿಸಿದೆ.

1. ಜಿಲ್ಲಾ ಆರೋಗ್ಯ ರಕ್ಷಾ ಸಮಿತಿ;
2. (HIV) ಏಡ್ಸ್ ತಡೆಗಟ್ಟುವ ಕಾರ್ಯಕ್ರಮಗಳ ಅನುಷ್ಠಾನ ಜಿಲ್ಲಾ ಮಟ್ಟದ ಸಮಿತಿ;
3. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಗಳ ಕ್ಷೇಮಾಭಿವೃದ್ಧಿ ಯೋಜನೆ;
4. ಏಕ ಗವಾಕ್ಷಿ ಯೋಜನೆ / PMRY ಯೋಜನೆ / ವಿಶ್ವಯೋಜನೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಪಿ.ಆರ್. 1444

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಕೆ. ತೀರ್ಥಪ್ಪ, ಹಿಂದಿನ ಉಪ ನಿರ್ದೇಶಕರು (ಖಾಗ್ರಾ), ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಂಘ, ಬೆಂಗಳೂರು (ಗ್ರಾಮಾಂತರ) ಜಿಲ್ಲೆ, ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣ ಮಟ್ಟದ ಪೀಠೋಪಕರಣ ಸರಬರಾಜು ಮಾಡಿ ಆರೋಪಕ್ಕೆ ಗುರಿಯಾಗಿರುವ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ವಾಕೈ 69 ಕೈಸೇವಿ 2002, ದಿನಾಂಕ: 24.6.2005.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶ ದಿನಾಂಕ: 24.6.2005 ರಲ್ಲಿ ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಈ ಹಿಂದೆ ಉಪ ನಿರ್ದೇಶಕರು (ಖಾಗ್ರಾ), ಬೆಂಗಳೂರು ನಗರ ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಮತ್ತು ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಈ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಿರುವ ಅವಧಿಯಲ್ಲಿ ಐ.ಪಿ.ಪಿ. ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣ ಇತ್ಯಾದಿ ಸಾಮಗ್ರಿಗಳನ್ನು ಸರಬರಾಜು ಮಾಡಿರುವ ಆರೋಪಕ್ಕೆ ಗುರಿಯಾಗಿದ್ದು, ಸದರಿ ಅಧಿಕಾರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 (5) ರನ್ವಯ ಹಾಗೂ ಅದೇ ನಿಯಮದ ಉಪ ನಿಯಮ (2) ರನ್ವಯ ಪ್ರದತ್ತವಾದ ಅಧಿಕಾರದನ್ವಯ ಸದರಿ ಪ್ರಕರಣದಲ್ಲಿ ವಿಚಾರಣೆಯನ್ನು ನಡೆಸಲು ಶ್ರೀ ಕೆ.ಎಂ.ವೈದ್ಯ ಮಾನ್ಯ ನಿವೃತ್ತ ನ್ಯಾಯಾಧೀಶರು, ನಂ.3 ಎ. ರಾಜಾಮಹಲ್ ವಿಲಾಸ್, 2ನೇ ಹಂತ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 (5) (ಸಿ) ರನ್ವಯ ಉಪ ನಿರ್ದೇಶಕರು (ಖಾಗ್ರಾ), ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿದೆ.

ಆದರೆ, ಪ್ರಕರಣದ ವಿಚಾರಣೆಯನ್ನು ನಡೆಸಲು ನೇಮಿಸಲಾಗಿದ್ದ ಶ್ರೀ ಕೆ.ಎಂ. ವೈದ್ಯ ಮಾನ್ಯ ನಿವೃತ್ತ ನ್ಯಾಯಾಧೀಶರು, ಇವರು ತಮಗೆ ಹೃದಯಾಘಾತವಾಗಿದ್ದು, ಹೃದಯ ಶಸ್ತ್ರಚಿಕಿತ್ಸೆಗೆ ಒಳಗಾಗಿದ್ದು, ತಮ್ಮ ಆರೋಗ್ಯ ಸ್ಥಿತಿ ಉತ್ತಮಗೊಂಡಿಲ್ಲದ ಕಾರಣ ಹಾಗೂ ವೈದ್ಯರ ಸಲಹೆ ಮೇರೆಗೆ ಒತ್ತಡದ ಕೆಲಸಗಳನ್ನು ನಿರ್ವಹಿಸದಿರಲು ಇಚ್ಛಿಸಿರುವುದಾಗಿ ಆದುದರಿಂದ, ಸದರಿ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ತಮ್ಮನ್ನು ನೇಮಕ ಮಾಡಿರುವುದನ್ನು ಕೈಬಿಡುವಂತೆ ಹಾಗೂ ತಮ್ಮ ಸಹಪಾಠಿಯಾದ ಶ್ರೀ ಪದ್ಮನಾಭ ಕೆಡಿಲಾಯ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಸಂಜಯನಗರ, ಬೆಂಗಳೂರು, ಇವರನ್ನು ಸದರಿ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಬಹುದೆಂದು ಸಹ ತಿಳಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿದ್ದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ವಾಕೈ 69 ಕೈಸೇವಿ 2002, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಹಾಗೂ ಸರ್ಕಾರದ ಆದೇಶ ಸಂಖ್ಯೆ:ವಾಕೈ 69 ಕೈಸೇವಿ 2002, ದಿನಾಂಕ: 24.6.2005 ನ್ನು ಮುಂದುವರಿಸುತ್ತಾ, ಶ್ರೀ ಕೆ. ತೀರ್ಥಪ್ಪ, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಈ ಹಿಂದೆ ಉಪ ನಿರ್ದೇಶಕರು (ಖಾಗ್ರಾ), ಬೆಂಗಳೂರು ನಗರ ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಮತ್ತು ವ್ಯವಸ್ಥಾಪಕ ನಿರ್ದೇಶಕರು, ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಈ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸಿರುವ ಅವಧಿಯಲ್ಲಿ ಐ.ಪಿ.ಪಿ. ಯೋಜನೆಯಡಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಕಳಪೆ ಗುಣಮಟ್ಟದ ಪೀಠೋಪಕರಣ ಇತ್ಯಾದಿ ಸಾಮಗ್ರಿಗಳನ್ನು ಸರಬರಾಜು ಮಾಡಿರುವ ಆರೋಪಕ್ಕೆ ಗುರಿಯಾಗಿದ್ದು ಸದರಿ ಅಧಿಕಾರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 (5) ರನ್ವಯ ಹಾಗೂ ಅದೇ ನಿಯಮದ ಉಪ ನಿಯಮ (2) ರನ್ವಯ ಪ್ರದತ್ತವಾದ ಅಧಿಕಾರದನ್ವಯ ವಿಚಾರಣೆಯನ್ನು ನಡೆಸಲು ಶ್ರೀ ಕೆ.ಎಂ. ವೈದ್ಯ ಮಾನ್ಯ ನಿವೃತ್ತ ನ್ಯಾಯಾಧೀಶರು, ನಂ.3 ಎ. ರಾಜಾಮಹಲ್ ವಿಲಾಸ್, 2ನೇ ಹಂತ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವುದನ್ನು ರದ್ದುಪಡಿಸಿ, ಸದರಿ ಪ್ರಕರಣದಲ್ಲಿ ವಿಚಾರಣೆ ನಡೆಸಲು ಶ್ರೀ ಪದ್ಮನಾಭ ಕೆಡಿಲಾಯ, ಮಾನ್ಯ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ನಂ.45, 4ನೇ ಕ್ರಾಸ್, ಜುಡಿಷಿಯಲ್ ಆಫೀಸರ್ಸ್ ಲೇಔಟ್, ಸಂಜಯನಗರ, ಬೆಂಗಳೂರು-94, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಅಲ್ಲದೆ, ಸದರಿ ಪ್ರಕರಣದಲ್ಲಿ ಉಪ ನಿರ್ದೇಶಕರು ( ಖಾಗ್ರಾ), ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಇವರನ್ನು ಮಂಡನಾಧಿಕಾರಿಯನ್ನಾಗಿ ಮುಂದುವರೆಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸಲು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರಿಗೆ ಸೂಚಿಸಲಾಗಿದೆ.

ಈ ಪ್ರಕರಣದ ವಿಚಾರಣೆಗಾಗಿ ರೂ.5,000.00 (ರೂಪಾಯಿ ಐದು ಸಾವಿರಗಳು ಮಾತ್ರ) ಮತ್ತು ವಾಹನ ಭತ್ಯೆ ರೂ.1,000.00 (ರೂಪಾಯಿ ಒಂದು ಸಾವಿರಗಳು ಮಾತ್ರ) ಸಂಚಿತ ಸಂಭಾವನೆಗಳನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಕೈಗಾರಿಕಾಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಒಂದು ತಿಂಗಳೊಳಗಾಗಿ ಪೂರ್ಣಗೊಳಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು)

ಪಿ.ಆರ್. 1450

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಹಿರಿಯ ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರು ಹುದ್ದೆಗಳನ್ನು ಹಿರಿಯ ಹಾಗೂ ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್, ಎಂದು ಮರು ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ:ಎಸ್‌ಆರ್‌ಆರ್: 2:03-04 ದಿನಾಂಕ:29.3.2004 ಮತ್ತು 30.5.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು,ಇವರು ಕರ್ನಾಟಕ ರಾಜ್ಯ ಸರ್ಕಾರಿ ಪ್ರಯೋಗ ಶಾಲಾ ತಂತ್ರಜ್ಞರ ಕೇಂದ್ರ ಸಂಘ, ಬೆಂಗಳೂರು, ಇವರ ಪತ್ರವನ್ನು ಲಗತ್ತಿಸಿ ಕಳುಹಿಸುತ್ತಾ ಹಿರಿಯ ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರುಗಳು ವಿವಿಧ ಆಸ್ಪತ್ರೆಗಳಲ್ಲಿ ಹಾಗೂ ಪ್ರಯೋಗಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ವಿವಿಧ ರಾಜ್ಯಗಳಲ್ಲಿ, ಈ ಹುದ್ದೆಯ ಪದನಾಮವನ್ನು ಹಿರಿಯ ಮತ್ತು ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್, ಎಂದು ಸಂಭೋದಿಸುತ್ತಿದ್ದು, ವೈದ್ಯಕೀಯ ಕ್ಷೇತ್ರದಲ್ಲಿ ಬಹು ಪ್ರಾಮುಖ್ಯತೆಯನ್ನು ಪಡೆದಿರುವ ಈ ಹುದ್ದೆಯ ಪದನಾಮಗಳನ್ನು 'ಹಿರಿಯ ಮತ್ತು ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್' ಎಂದು ಮರು ಪದನಾಮಿಕರಿಸುವಂತೆ ಕೋರಿರುತ್ತಾರೆ.

ಕರ್ನಾಟಕ ರಾಜ್ಯದ ನೆರೆಯ ರಾಜ್ಯವಾದ (ವೆಸ್ಟ್ ಬೆಂಗಾಲ್) ಪಶ್ಚಿಮ ಬಂಗಾಳ, ರಾಜ್ಯದಲ್ಲಿ, ಹಿರಿಯ ಹಾಗೂ ಕಿರಿಯ ಪ್ರಯೋಗಶಾಲಾ ತಂತ್ರಜ್ಞರುಗಳ ಹುದ್ದೆಗಳನ್ನು ಹಿರಿಯ ಹಾಗೂ ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್ ಎಂದು ಕರೆಯುತ್ತಿರುವುದರಿಂದ, ರಾಜ್ಯದಲ್ಲಿನ ಹಿರಿಯ ಹಾಗೂ ಕಿರಿಯ ಪ್ರಯೋಗಶಾಲಾ ತಂತ್ರಜ್ಞರ ಹುದ್ದೆಗಳನ್ನು 'ಹಿರಿಯ ಹಾಗೂ ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಜಿಸ್ಟ್' ಎಂದು ಮರು ಪದನಾಮಿಕರಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ.

### ಸರ್ಕಾರದ ಆದೇಶ ಸಂಖ್ಯೆ:ಆಕುಕ 287 ಸಿಜಿಇ 2005, ಬೆಂಗಳೂರು, ದಿನಾಂಕ 27ನೇ ಸೆಪ್ಟೆಂಬರ್ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ 'ಹಿರಿಯ ಪ್ರಯೋಗಶಾಲಾ ತಂತ್ರಜ್ಞರು' ಮತ್ತು 'ಕಿರಿಯ ಪ್ರಯೋಗಶಾಲಾ ತಂತ್ರಜ್ಞರು' ಹುದ್ದೆಗಳಿಗೆ ನಿಗಧಿಪಡಿಸಿರುವ ವೇತನ ಶ್ರೇಣಿ ರೂ.4150-7800 ಮತ್ತು ರೂ.3850-7050 ರಲ್ಲಿ ಯಾವುದೇ ವ್ಯತ್ಯಾಸವಿಲ್ಲದೇ ಹಾಗೂ ಮುಂದೆ ಹೆಚ್ಚಿನ ವೇತನ ಶ್ರೇಣಿ ನೀಡಲು ಕೋರಿ ಪ್ರಸ್ತಾವನೆ ಸಲ್ಲಿಸಕೂಡದೆಂಬ ಷರತ್ತಿಗೊಳಪಟ್ಟು 'ಹಿರಿಯ ಪ್ರಯೋಗಶಾಲಾ ತಂತ್ರಜ್ಞರು ಮತ್ತು ಕಿರಿಯ ಪ್ರಯೋಗಶಾಲಾ ತಂತ್ರಜ್ಞರು' ಹುದ್ದೆಗಳ ಪದನಾಮವನ್ನು "ಹಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಜಿಸ್ಟ್" ಮತ್ತು "ಕಿರಿಯ ವೈದ್ಯಕೀಯ ಪ್ರಯೋಗಶಾಲಾ ಟೆಕ್ನಾಲಾಜಿಸ್ಟ್" ಎಂದು ಮರು ಪದನಾಮಗೊಳಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಆರ್. ಶಂಕರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1452

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಎಂ. ದೊಡ್ಡಪ್ಪ, ಶ್ರೀ ಎಲ್. ವೇಣುಗೋಪಾಲ್, ಶ್ರೀ ಎನ್. ಉದಯ ಕುಮಾರ್, ಶ್ರೀ ವಿ. ಅಶೋಕ ಕುಮಾರ್, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಹೊರಡಿಸಲಾದ ಆದೇಶವನ್ನು ಹಿಂದಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆನಾಸ 251 ಆಇಸೇ 2003 ದಿನಾಂಕ: 2.8.2005.
2. ಶ್ರೀ ಎಸ್.ಎಸ್. ಸಂಗೊಳ್ಳಿ, ವಿಚಾರಣಾಧಿಕಾರಿಗಳು ಮತ್ತು ನಿವೃತ್ತ ಜಿಲ್ಲಾ ನ್ಯಾಯಾಧೀಶರವರ ಪತ್ರ ಸಂಖ್ಯೆ:ಸಿಎಫ್‌ಎಸ್.ಇಎಸ್‌ಟಿ(2)13:2000-01 ದಿನಾಂಕ:8.9.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಎಂ. ದೊಡ್ಡಪ್ಪ ಹಾಗೂ ಇತರರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಶ್ರೀ ಎಸ್.ಎಸ್. ಸಂಗೊಳ್ಳಿ ಇವರ ಪತ್ರದಲ್ಲಿ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ತಾಂತ್ರಿಕ ದೋಷವಿರುವುದಾಗಿ ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಮೇಲೆ (1)ರಲ್ಲಿ ಓದಲಾದ ಆದೇಶವನ್ನು ಹಿಂದಕ್ಕೆ ಪಡೆಯಲು ಸರ್ಕಾರ ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

### ಸರ್ಕಾರಿ ಆದೇಶ ಸಂಖ್ಯೆ: ಆನಾಸ 251 ಆಇಸೇ 2003, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್ 2005

ಸರ್ಕಾರದ ಆದೇಶ ಸಂಖ್ಯೆ: ಆನಾಸ 251 ಆಇಸೇ 2003 ದಿನಾಂಕ: 2.8.2005ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ, ಆಹಾರ-1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 1455

## KARNATAKA LEGISLATIVE COUNCIL SECRETARIAT

**Read:** The decision of Special Board of the legislature held on 23rd September 2005 regarding creation of a Common Cadre post of Principal Secretary in Karnataka Legislature.

**Preamble:-**

Whereas it is expedient to create a Cadre Post common to the Secretariats of both Houses of the State Legislature.

Whereas the Constitution of India provides in terms of Article 187 for creation of posts common to both Secretariats and the Cadre & Recruitment Rules of either Secretariat in force do not provide for such posts.

And whereas the Special Board of the Legislature of both the Secretariats have concurred for the creation of the common cadre post of Principal Secretary in the interest of better and effective administrative of both the Karnataka Legislative Council Secretariat and the Karnataka Legislative Assembly Secretariat.

And further whereas the Special Board of the Legislature at its Meeting held on 23.9.2005 at Bangalore resolved to create the common post of Principal Secretary for which the Finance Department has given its concurrence vide UO Note No FD 1056 Expr-7/05 dated 19.10.2005.

Hence this Order

**Order No. KLCS/ADM-1/76/CPS/2005, Bangalore, Dated 20th October 2005**

In exercise of the powers vested in the State Legislature under Article 187 of the Constitution of India read with the first proviso to Section 8 of the Karnataka Civil Services Act, 1978 (Karnataka Act 14 of 1990) the Special Board of the Legislature, in the absence of Rules providing specifically for creation of posts common to the Secretariats of both Houses of the State Legislature, have by this Executive Order, pending suitable amendment to the Cadre & Recruitment Rules either or both Secretariats, created the common post of principal Secretary, in terms noted against below:

**One post of principal secretary, Karnataka Legislature to be filled:**

a) By deputation of a suitable Judicial Officer not below the rank of senior District Judge, in the selection grade

**OR**

b) By appointment of a suitable officer who has worked for at least one year as secretary to Government in the Department of parliamentary Affairs & Legislation, or the Department of Law , Government of Karnataka.

**Terms of appointment**

1) The term of office of the post of the principle secretary, shall be three years from the date of assuming charge of the post on deputation or ,in the case of appointment subject to maximum of 60 years of age

2) The principle secretary shall exercise such powers and perform such duties as the chairman Legislative Council or the speaker, Legislative Assembly may from time to time specify by Order.

3) The principle secretary shall perform his duties exclusively entrusted to him in the Legislature and shall not accept or perform any other any job in other department or other organisation.

4) This order issues with the concurrence of Finance Department vide U.O. Note FD 1056 Exp7/05 dated 19-10-2005.

By Order of the Special Board Karnataka Legislature,

P.R. 1464

**T. KRISHNEGOWDA**

Deputy Secretary, Karnataka Legislative Council

**INFRASTRUCTURE DEVELOPMENT SECRETARIAT**

**Sub:** Release of consultancy Services fees to iDeCK for Rapid Traffic Study for identification of Traffic Corridors in Bangalore

**Read:**
1. Proceedings of the meeting held by the Principal Secretary to Government, Infrastructure Development Department on 14-6-2005
2. Letter No.iDeCK/2005/06-298 dated 17-6-2005 of CEO, iDeCK, addressed to Principal Secretary to Government, Infrastructure Development Department.
3. Government letter No.IDD 63 NSW 2005, dated 1-8-2005 addressed to the CEO, iDeCK, Bangalore.
4. Letter from iDeCK No.iDeCK /2005-06/470 dated 16-8-2005 addressed to Principal Secretary to Government, Infrastructure Development Department.

**Preamble:-**

1. In the meeting held by the Principal Secretary to Government,Infrastructure Development Department read at (1) above, it was decided that iDeCK would carry out the Rapid Traffic Study (RTS) in

co-ordination with RITES, BMTC,BMRTL, the Bangalore Traffic Police and the Transport Department for the purpose of identifying suitable corridors for implementation of the Mono Rail System in Bangalore city and iDeCK was requested to submit its financial proposal for the RTS at the earliest for its consideration and approval. iDeCK assured in the meeting that they would submit the finding of the RTS within a period of 6 weeks from award of mandate.

2. In the letter of iDeCK read at (2) above,the Chief Executive Officer, iDeCK sent a proposal for consultancy services for the above project.

3. In the letter read at (3) above, Govt.approval for the study was communicated with a request to iDeCK to complete the study within 6 weeks and report to be submitted immediately thereafter.

4. iDeCK in is letter read at (4) above stated that they have commenced the work on the study and have appointed RITES for assisting the Study. Further, they have requested for payment of first instalment of consultancy services fees of Rs.1,15,710/- out of the total fee of Rs.3.5 Lakhs.

5. Government have examined this proposal and have decided to release Rs.1,15,710/-towards the first instalment of consultancy services fees to iDeCK for undertaking Rapid Traffic Study for identification of Traffic Corridor in Bangalore City. Hence this order.

**Government Order No. IDD 63 NSW 2005, Bangalore, Dated: 15th October 2005**

1. After careful examination of the proposal of iDeCK, Government are pleased to release Rs.1,15,710.00 (Rupees One lakh fifteen thousand seven hundred and ten)Only and this amount should be utilised for the project studies entrusted to iDeCK.

2. This amount would be met out of the available funds under the Head of Account '3451-00-090-1-06-125- Secretariat Economic Services-Infrastructure Preliminary Studies- Modernization (plan) 2005-06.

3.The Chief Financial Officer (CFO)of iDeCK would draw this amount on a payee's receipt duly countersigned by the Under Secretary to Government, Infrastructure Development Department.

4.This order issues in accordance with the powers delegated to the principal Secretaries to Government, by the Finance Department's G.O.No FD 1TFP 2003, dated 12-06-2003.

By Order and in the name of the Governor of Karnataka,

P.R. 1465

**T.B. RENUKAPRASAD**
Under Secretary to Government,
Infrastructure Development Department.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಡಾ: ಕೆ. ರಾಮೇಶ್ವರಪ್ಪ, ಉಪನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಚಾಮರಾಜನಗರ, ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಡುವ ಬಗ್ಗೆ - ಆದೇಶ.

**ಓದಲಾಗಿದೆ:** 1. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆನಾಸ 65 ಆಇಸೇ 2002 ದಿನಾಂಕ 30.5.2005.

2. ಆಪಾದಿತ ಅಧಿಕಾರಿಯ ರಕ್ಷಣಾ ಹೇಳಿಕೆ ದಿನಾಂಕ 12.8.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸಿನಲ್ಲಿ ಡಾ: ಕೆ. ರಾಮೇಶ್ವರಪ್ಪ, ಇವರು ಬಾಗಲಕೋಟೆ ಜಿಲ್ಲೆಯಲ್ಲಿ ಆನಾಸ ಇಲಾಖೆಯ ಉಪನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಆನಾಸ 44 ಆಇಸೇ 2001 ದಿನಾಂಕ 19.1.2002ರಲ್ಲಿ ಶ್ರೀ ರಂಗಸ್ವಾಮಯ್ಯ, ಆಹಾರ ಶಿರಸ್ತೇದಾರ್, ತಾಲ್ಲೂಕು ಕಚೇರಿ ಬಾದಾಮಿ, ಬಾಗಲಕೋಟೆ ಜಿಲ್ಲೆ, ಇಲ್ಲಿಗೆ ವರ್ಗಾಯಿಸಲಾಗಿದ್ದು ಸದರಿ ನೌಕರರನ್ನು ಕರ್ತವ್ಯಕ್ಕೆ ಹಾಜರುಪಡಿಸಿಕೊಳ್ಳದೆ ಸರ್ಕಾರದ ಆದೇಶವನ್ನು ಉಲ್ಲಂಘಿಸಿರುವ ಹಿನ್ನಲೆಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲು ದೋಷಾರೋಪಣಾ ಪಟ್ಟಿಯನ್ನು ಸಿದ್ದಪಡಿಸಿ ಲಿಖಿತ ಹೇಳಿಕೆ ನೀಡಲು ಸೂಚಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆಪಾದಿತ ಅಧಿಕಾರಿಯ ಲಿಖಿತ ಹೇಳಿಕೆಯಲ್ಲಿ, ಶ್ರೀ ರಂಗಸ್ವಾಮಯ್ಯ, ಆಹಾರ ಶಿರಸ್ತೇದಾರ್ ಇವರು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದ್ದು ಅಥವಾ ವರದಿ ಮಾಡಿಸಿಕೊಳ್ಳದ್ದು ಆಹಾರ ಶಿರಸ್ತೇದಾರ್ ಮತ್ತು ತಹಶೀಲ್ದಾರರ ತಪ್ಪೇ ವಿನಹ ಉಪನಿರ್ದೇಶಕರದ್ದಲ್ಲ ಹಾಗೂ ಈ ಆದೇಶವನ್ನು ಉಲ್ಲಂಘಿಸಿರುವವರು ಬೆಳಗಾವಿ ವಿಭಾಗಾಧಿಕಾರಿಗಳು ಮತ್ತು ತಹಶೀಲ್ದಾರರೇ ವಿನಹ ಉಪನಿರ್ದೇಶಕರದ್ದಲ್ಲ ಎಂದು ತಿಳಿಸಿರುತ್ತಾರೆ.

ಬೆಳಗಾವಿ ವಿಭಾಗಾಧಿಕಾರಿಗಳು ತಮ್ಮ ಆದೇಶ ಸಂಖ್ಯೆ:ಆರ್‌ಬಿ.ಇಎಸ್‌ಟಿ.2.ಸಿಆರ್.109.2000-01 ದಿನಾಂಕ: 19.1.2002ರಲ್ಲಿ ಶ್ರೀ ಬಿ.ಎನ್. ಪಾಟೀಲ, ಪ್ರಥಮ ದರ್ಜೆ ಆಹಾರ ನಿರೀಕ್ಷಕರು ಇವರಿಗೆ ಬಡ್ತಿ ನೀಡಿ ಶಿರಸ್ತೇದಾರ್ (ಆಹಾರ), ತಹಶೀಲ್ದಾರ್ ಕಾರ್ಯಾಲಯ, ಬಾದಾಮಿ, ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿದ್ದು ದಿನಾಂಕ: 22.1.2002ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಈ ಬಗ್ಗೆ ಉಪನಿರ್ದೇಶಕರು ಸಂಬಂಧಪಟ್ಟ ತಹಶೀಲ್ದಾರ್‌ರವರಿಗೆ ಪತ್ರ ಬರೆದು ಆಹಾರ, ನಾಗರೀಕ ಸರಬರಾಜು ಇಲಾಖೆಯ ಹುದ್ದೆಗಳನ್ನು ಇಲಾಖೆಯ ಮುಖ್ಯಸ್ಥರೇ ನೇಮಕ/ವರ್ಗಾವಣೆ ಮಾಡುವ ಪ್ರಾಧಿಕಾರವಾಗಿದ್ದು ಬೇರೆ ಯಾವುದೇ ಇಲಾಖೆಗಳು ಈ ಹುದ್ದೆಗಳಿಗೆ ನೇಮಕಾತಿ ಮಾಡಬಾರದು ಹಾಗೂ ಅಂತಹ ನೇಮಕಾತಿಗಳನ್ನು ಒಪ್ಪಬಾರದೆಂದು, ಈ ಪ್ರಕರಣವು ಇಲಾಖೆಯ ಮುಖ್ಯಸ್ಥರು ನೀಡುವ ಆದೇಶಗಳಿಗೆ ವಿರುದ್ಧವಾಗಿರುವುದರಿಂದ ಶ್ರೀ ರಂಗಸ್ವಾಮಯ್ಯ ಇವರನ್ನು ಬಾದಾಮಿ ತಹಶೀಲ್ದಾರ್ ಕಛೇರಿಯ ಶಿರಸ್ತೇದಾರ್ ಹುದ್ದೆಗೆ ಹಾಜರುಪಡಿಸಿಕೊಳ್ಳಲು ಸೂಚಿಸಿರುತ್ತಾರೆ. ಅಲ್ಲದೇ ಬಾಗಲಕೋಟೆ ಜಿಲ್ಲಾಧಿಕಾರಿಗಳು ಈ ಬಗ್ಗೆ ಆಯುಕ್ತರು, ಆನಾಸ ಇಲಾಖೆ ಇವರಿಗೆ ಪತ್ರ ಬರೆದು ಶ್ರೀ ರಂಗಸ್ವಾಮಯ್ಯ ಇವರನ್ನು ಬೇರೆ ಖಾಲಿ ಇರುವ ಕಡೆ ನೇಮಿಸಲು ಕೋರಿರುತ್ತಾರೆ.

ಡಾ: ಕೆ. ರಾಮೇಶ್ವರಪ್ಪ, ಇವರು ನೀಡಿರುವ ರಕ್ಷಣಾ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿದ ನಂತರ ಅವುಗಳನ್ನು ಒಪ್ಪಿ ಅವರ ವಿರುದ್ಧ ಮುಂದಿನ ಶಿಸ್ತು ಕ್ರಮವನ್ನು ಕೈಬಿಡಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 65 ಆಇಸೇ 2002, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಡಾ: ಕೆ. ರಾಮೇಶ್ವರಪ್ಪ, ಉಪನಿರ್ದೇಶಕರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11ರ ರೀತ್ಯಾ ಹೂಡಲಾದ ಇಲಾಖಾ ವಿಚಾರಣೆಯ ಮುಂದಿನ ಕ್ರಮವನ್ನು ಕೈಬಿಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 1466

ಪೀಠಾಧಿಕಾರಿ, ಆಹಾರ-1 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಗೌರವಾನ್ವಿತ ಬಾಂಬೆ ಉಚ್ಚ ನ್ಯಾಯಾಲಯದಲ್ಲಿ ದಾಖಲಾದ ಸೂಟ್ ಸಂಖ್ಯೆ: 1569/02ಕ್ಕೆ ಸಂಬಂಧಿಸಿದಂತೆ ಸರ್ಕಾರಿ ವಕೀಲರ ಹಾಗೂ ಸ್ಥಳೀಯ ವಕೀಲರ ವೆಚ್ಚ 73,962/- ರೂಗಳಿಗೆ ಮಂಜೂರಾತಿ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಎಲ್‌ಡಬ್ಲ್ಯೂಎ 10/ಎಲ್‌ಓಎನ್/2002 ದಿನಾಂಕ 9.9.03.
2. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿಎಸ್/ಎಲ್‌ಕ್ಯೂಡಿ/74-2000-01 ದಿನಾಂಕ: 10.6.04.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಶ್ರೀ ಶಶಿಧರ್ ಎಸ್. ಕರ್ಮಡಿ ಸರ್ಕಾರಿ ವಕೀಲರು ಕರ್ನಾಟಕ ಉಚ್ಚ ನ್ಯಾಯಾಲಯ ರವರನ್ನು ಶ್ರೀ ಮಹದೇಶ್ವರ ಸಕ್ಕರೆ ಕಾರ್ಖಾನೆ (ನಿ) ಕೊಳ್ಳೇಗಾಲ ಇದರ ಸಾಲದ ಬಾಕಿ ವಿಷಯದಲ್ಲಿ ರೋಬೊ ಇಂಡಿಯ ಫೈನಾನ್ಸ್ ಪ್ರೈ (ಲಿ), ರವರು ಬಾಂಬೆ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ್ದ ಸೂಟ್ ಸಂಖ್ಯೆ: 1569/02ರ ಸಂಬಂಧ ಪ್ರಕರಣವನ್ನು ಇತ್ಯರ್ಥಪಡಿಸಲು, ಸರ್ಕಾರದ ಪರವಾಗಿ ಭಾಗವಹಿಸಿ, ಕ್ರಮವಹಿಸುವಂತೆ ನೇಮಕ ಮಾಡಲಾಗಿತ್ತು. ಹಾಗೂ ಸದರಿ ಪ್ರಕರಣವನ್ನು ಮುಂದುವರಿಸಿಕೊಂಡು ಹೋಗಲು ಮುಂಬೈಯಲ್ಲಿನ ಸ್ಥಳೀಯ ವಕೀಲರಾದ ಶ್ರೀ.ಜಿ.ಎಸ್. ಹೆಗಡೆ ರವರಿಗೆ ವಹಿಸಲಾಗಿತ್ತು. ಈ ಪ್ರಕರಣದಲ್ಲಿ ಮುಂಬೈ ಉಚ್ಚ ನ್ಯಾಯಾಲಯಕ್ಕೆ ಹೋಗಿ ಬರುವ ಸಂಬಂಧದಲ್ಲಿನ ಪ್ರಯಾಣದ ಬಿಲ್ಲು ಹಾಗೂ ಇತರೆ ವೆಚ್ಚಗಳು ರೂ 73.692/ ನ್ನು ಸರ್ಕಾರಿ ವಕೀಲರಾದ ಶ್ರೀ ಶಶಿಧರ್ ಎಸ್, ಕರ್ಮಡಿ ಹಾಗೂ ಶ್ರೀ ಜಿ.ಎಸ್. ಹೆಗಡೆ ರವರಿಗೆ ಪಾವತಿಸಬೇಕಾಗಿದ್ದು ಇವರುಗಳಿಂದ ಪಡೆದ ಬಿಲ್ಲುಗಳು, ವಿಮಾನ ಪ್ರಯಾಣದ ಟಿಕೇಟುಗಳು ಹಾಗೂ ಇತರೆ ವೆಚ್ಚಗಳಿಗೆ ಸಂಬಂಧಿಸಿದ ರಸೀದಿಗಳನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಕಳುಹಿಸಿ ಈ ಸಂಬಂಧ ಇಲಾಖೆಗೆ ಹಣ ಬಿಡುಗಡೆ ಮಾಡಲು ಮೇಲೆ ಓದಲಾದ (2) ರಲ್ಲಿರುವ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 143 ಎಸ್‌ಜಿಎಫ್ 04, ಬೆಂಗಳೂರು, ದಿನಾಂಕ: 19ನೇ ಅಕ್ಟೋಬರ್ 2005**

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಪ್ರಸ್ತಾವನೆಯಲ್ಲಿ ಕೋರಿದಂತೆ, ಶ್ರೀ ಶಶಿಧರ್ ಎಸ್.ಕರ್ಮಡಿ, ಹೈ ಕೋರ್ಟ್ ಗೌರ್ನಮೆಂಟ್ ಫ್ಲೀಡರ್ ಕರ್ನಾಟಕ, ಬೆಂಗಳೂರು ರವರು ಶ್ರೀ ಮಹದೇಶ್ವರ ಸಕ್ಕರೆ ಕಾರ್ಖಾನೆ (ನಿ), ಕೊಳ್ಳೇಗಾಲ, ಈ ಕಾರ್ಖಾನೆಯ ಸಾಲ ಪಾವತಿ ಸಂಬಂಧ ರೋಬೊ ಇಂಡಿಯಾ ಫೈನಾನ್ಸ್ ಪ್ರೈ (ಲಿ) ರವರು ಬಾಂಬೆ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ್ದ ಸೂಟ್ ಸಂಖ್ಯೆ: 1569/02 ಕ್ಕೆ ಸಂಬಂಧಿಸಿದಂತೆ ಸರ್ಕಾರದ ಪರವಾಗಿ ಪ್ರಕರಣ ಇತ್ಯರ್ಥ ಪಡಿಸಲು ಮುಂಬೈಗೆ ಹೋಗಿ ಬರಲು ಮಾಡಲಾದ ವೆಚ್ಚ ಹಾಗೂ ಮುಂಬೈನ ಸ್ಥಳೀಯ ವಕೀಲರಾದ ಶ್ರೀ ಜಿ ಎಸ್. ಹೆಗಡೆ ರವರ ವೆಚ್ಚದ ಬಾಬ್ತು ಪಾವತಿಸಲು ಒಟ್ಟು ರೂ.73,962/- (ಎಪ್ಪತ್ತಮೂರು ಸಾವಿರದ ಒಂಬೈನೂರ ಅರವತ್ತೆರಡು ರೂಗಳು ಮಾತ್ರ ) ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಹಣವನ್ನು 2005 06ನೇ ಸಾಲಿನಲ್ಲಿ ಪೂರಕ ಅಂದಾಜು (ಮೊದಲನೆ ಕಂತು) ನಲ್ಲಿ ಹೆಚ್ಚುವರಿ ಅನುದಾನವಾಗಿ ಮಂಜೂರು ಮಾಡಿದ್ದು ಲೆಕ್ಕ ಶೀರ್ಷಿಕೆ 2852-08-201-0-01 (ಯೋಜನೇತರ) 059 ಇತರ ಖರ್ಚು ಇದರಡಿಯಲ್ಲಿ ಒದಗಿಸಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಸಕ್ಕರೆ ನಿರ್ದೇಶಕರು ಬೆಂಗಳೂರು ರವರು ಹಣ ಸೆಳೆಯುವ ಅಧಿಕಾರಿಯಾಗಿರುತ್ತಾರೆ. ಈ ಮೊತ್ತವನ್ನು ಉಪಯೋಗಿಸುವ ಸಲುವಾಗಿ ದಿನಾಂಕ 2.9.2005ರ ಪತ್ರ ಸಂಖ್ಯೆ. ಆಇ/05/ಬಿಎಸ್‌ಜಿ/05ರಲ್ಲಿ ಆರ್ಥಿಕ ಇಲಾಖೆ ಒಪ್ಪಿಗೆ ನೀಡಿದ್ದು ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ/1028/ವೆಚ್ಚ.1/2004 ದಿ.20.6.05 ಹಾಗೂ ಅನಧಿಕೃತ ಟಿಪ್ಪಣಿ ಸಂಖ್ಯೆ: 1028.ವೆಚ್ಚ.1/2005 ದಿನಾಂಕ.6.9.05 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1467

ಪೀಠಾಧಿಕಾರಿ (ಸಕ್ಕರೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆ: ವೆನಿಕಾ ಹೈಡ್ರೋ ಪ್ರೊಜೆಕ್ಟ್ಸ್ ಲಿಮಿಟೆಡ್ ಕಂಪನಿಗೆ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕ್ರೆಡಲ್ /06/ ಅಂತರಾಳ್-ನಾಗರಹಳ್/2005/ 1751, ದಿನಾಂಕ: 22.09.2005.
2. ದಿನಾಂಕ: 30.09.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ವೆನಿಕಾ ಹೈಡ್ರೋ ಪ್ರೊಜೆಕ್ಟ್ಸ್ ಲಿಮಿಟೆಡ್, ಈ ಕಂಪೆನಿಗೆ ಗುಲ್ಬರ್ಗ ಜಿಲ್ಲೆಯ ಶೊರಾಪುರ ತಾಲ್ಲೂಕಿನ ನಾಗರಹಳ್ ಗ್ರಾಮದ ಬಳಿ ಕೃಷ್ಣಾ ನದಿಯ ಉಪನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ ಎರಡು ಮೆಗಾವ್ಯಾಟ್ ಸಾಮರ್ಥ್ಯದ ಅಂತರಾಳ್ - ನಾಗರಹಳ್ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 277 ಎನ್‌ಸಿಇ 2005, ಬೆಂಗಳೂರು, ದಿನಾಂಕ :14ನೇ ಅಕ್ಟೋಬರ್ 2005**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ವೆನಿಕಾ ಹೈಡ್ರೊ ಪ್ರೊಜೆಕ್ಟ್ಸ್ ಲಿಮಿಟೆಡ್ ಈ ಕಂಪನಿಗೆ ಗುಲ್ಬರ್ಗ ಜಿಲ್ಲೆಯ ಶೊರಾಪುರ ತಾಲ್ಲೂಕಿನ ನಾಗರಹಳ್ ಗ್ರಾಮದ ಬಳಿ ಕೃಷ್ಣಾ ನದಿಯ ಉಪನದಿಯಾದ ದೇವಪುರ ನಾಲೆಗೆ ಅಡ್ಡಲಾಗಿ ಎರಡು ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲಸಂಪನ್ಮೂಲ ಇಲಾಖೆಯ ಅನುಮತಿ ಪಡೆಯಬೇಕೆಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ನೀರಾವರಿ ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಹಿನ್ನೆಲೆಯಲ್ಲಿ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1476

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** ವಿವಿಧ ವರ್ಗಗಳ ಕಾರ್ಮಿಕರ ಮಕ್ಕಳನ್ನು ಶಿಕ್ಷಣದ ಮುಖ್ಯವಾಹಿನಿಗೆ ತರುವ ಸಲುವಾಗಿ ಕಾರ್ಯಪಡೆ ರಚನೆ-ಸರ್ಕಾರಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿ:31-8-2005 ರಂದು ನಡೆದ ಕೆಡಿಪಿ ಸಭೆಯ ನಡವಳಿಗಳು.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರ ಟಿಪ್ಪಣಿ ಸಂಖ್ಯೆ:ಕೆಡಿಪಿ/ಶಾಹೊಮ/01/2005-06 ದಿ:24.9.2005.

**ಪ್ರಸ್ತಾವನೆ:**

ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 31.8.2005ರಂದು ನಡೆದ ರಾಜ್ಯ ಮಟ್ಟದ ಕೆ.ಡಿ.ಪಿ ಸಭೆಯಲ್ಲಿ ವಲಸೆ ಕಾರ್ಮಿಕರು, ಕಟ್ಟಡ ನಿರ್ಮಾಣ ಕಾರ್ಮಿಕರು, ಗಣಿ ಕಾರ್ಮಿಕರ ಮಕ್ಕಳನ್ನು ಶಿಕ್ಷಣದ ಮುಖ್ಯವಾಹಿನಿಗೆ ತಂದಿರುವ ಮಕ್ಕಳನ್ನು ಶಾಲೆಯಲ್ಲಿ ಉಳಿಯುವಂತೆ ಮಾಡಲು ಸಂಬಂಧಪಟ್ಟ ಇಲಾಖೆಗಳ ನಡುವೆ ಸಮನ್ವಯದ ಅವಶ್ಯಕತೆ ಇರುವುದರಿಂದ ಈ ಉದ್ದೇಶ ಸಾಧನೆಗಾಗಿ ಸಂಬಂಧಪಟ್ಟ

ಇಲಾಖೆಗಳನ್ನೊಳಗೊಂಡ ಕಾರ್ಯಪಡೆಯನ್ನು ರಚಿಸುವಂತೆ ಸೂಚಿಸಿತು. ಆದರಂತೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 24.9.2005ರ ಟಿಪ್ಪಣಿಯಲ್ಲಿ ಈ ಬಗ್ಗೆ ಕಾರ್ಯಪಡೆಯನ್ನು ರಚಿಸಿ ಅದಕ್ಕೆ ಕಾರ್ಯ ನಿಗದಿಪಡಿಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 458 ಯೋಸಕ 2005, ಬೆಂಗಳೂರು, ದಿನಾಂಕ: 5ನೇ ನವೆಂಬರ್ 2005**

ಸರ್ಕಾರವು ವಲಸೆ ಕಾರ್ಮಿಕರು, ಕಟ್ಟಡ ನಿರ್ಮಾಣ ಕಾರ್ಮಿಕರು, ಗಣಿ ಕಾರ್ಮಿಕರ ಮಕ್ಕಳನ್ನು ಶಿಕ್ಷಣದ ಮುಖ್ಯವಾಹಿನಿಗೆ ತರುವ ಹಾಗೂ ಈ ರೀತಿ ಮುಖ್ಯವಾಹಿನಿಗೆ ತಂದ ಮಕ್ಕಳನ್ನು ಶಾಲೆಯಲ್ಲಿ ಉಳಿಯುವಂತೆ ಮಾಡುವ ಸಲುವಾಗಿ ಅಂತರ ಇಲಾಖೆಗಳನ್ನು ಒಳಗೊಂಡ ಕಾರ್ಯಪಡೆ ಹಾಗೂ ಸಮನ್ವಯ ಸಮಿತಿ ಈ ಮುಂದಿನಂತೆ ರಚಿಸುತ್ತದೆ.

| | | | |
|---|---|---|---|
| 1) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ | - | ಅಧ್ಯಕ್ಷರು |
| 2) | ಸರ್ಕಾರದ ಕಾರ್ಯದರ್ಶಿ, ಪ್ರಾ ಮತ್ತು ಪ್ರೌ.ಶಿ. ಇಲಾಖೆ | - | ಉಪಾಧ್ಯಕ್ಷರು |
| 3) | ಸರ್ಕಾರದ ಕಾರ್ಯದರ್ಶಿ, ಒಳಾಡಳಿತ ಇಲಾಖೆ | - | ಸದಸ್ಯರು |
| 4) | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | - | ಸದಸ್ಯರು |
| 5) | ಆಯುಕ್ತರು, ಕಾರ್ಮಿಕ ಇಲಾಖೆ | - | ಸದಸ್ಯರು |
| 6) | ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | - | ಸದಸ್ಯರು |
| 7) | ನಿರ್ದೇಶಕರು (ಪ್ರಾ.ಶಿ.) ಸಾರ್ವಜನಿಕ ಶಿಕ್ಷಣ ಇಲಾಖೆ | - | ಸದಸ್ಯರು |
| 8) | ನಿರ್ದೇಶಕರು, ಗಣಿ ಮತ್ತು ಭೂಗರ್ಭಶಾಸ್ತ್ರ ಇಲಾಖೆ | - | ಸದಸ್ಯರು |
| 9) | ನಿರ್ದೇಶಕರು, ಪೌರಾಡಳಿತ ಇಲಾಖೆ | - | ಸದಸ್ಯರು |
| 10) | ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ | - | ಸದಸ್ಯರು |
| 11) | ನಿರ್ದೇಶಕರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | - | ಸದಸ್ಯರು |
| 12) | ರಾಜ್ಯಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ | - | ಸದಸ್ಯ ಕಾರ್ಯದರ್ಶಿ |

ಸಮಿತಿಯು ಪ್ರತಿ 3 ತಿಂಗಳಿಗೊಮ್ಮೆ ಸಭೆ ಸೇರಿ ಈ ವಿಷಯದಲ್ಲಿ ಅವಶ್ಯಕವಾದ ಸಮನ್ವಯವನ್ನು ಉಂಟುಮಾಡಿ ಶಿಕ್ಷಣದ ಮುಖ್ಯವಾಹಿನಿಯಿಂದ ಹೊರಗುಳಿದ ಮಕ್ಕಳನ್ನು ಮುಖ್ಯವಾಹಿನಿಗೆ ತಂದಿರುವ ಕುರಿತು ಹಾಗೂ ಈ ವರ್ಗದ ಮಕ್ಕಳು ಶಾಲೆ ಬಿಡದಂತೆ ಕ್ರಮ ವಹಿಸಿರುವ ಬಗ್ಗೆ ಪರಿಶೀಲಿಸಿ ಅಗತ್ಯ ಮಾರ್ಗದರ್ಶನ ನೀಡುತ್ತದೆ. ಈ ದಿಶೆಯಲ್ಲಿ ಅಂತರ ಇಲಾಖೆಗಳ ನಡುವೆ ಸಮನ್ವಯದ ಕೊರತೆಯನ್ನು ನೀಗಿಸಿ ಶಾಲೆಗೆ ದಾಖಲಾದ ಮಕ್ಕಳು ಶಾಲೆ ಬಿಡುವ ಪ್ರಮಾಣವನ್ನು ತಗ್ಗಿಸಲು ಕ್ರಮಕೈಗೊಳ್ಳುತ್ತದೆ.

ಈ ಕಾರ್ಯಪಡೆ/ಸಮನ್ವಯ ಸಮಿತಿಗೆ ಸಭೆ ಸೇರಲು ಸ್ಥಳಾವಕಾಶ ಕಲ್ಪಿಸಲು ಸೌಲಭ್ಯಗಳನ್ನು ಒದಗಿಸಲು ಮತ್ತು ಸಚಿವಾಲಯ ಸಹಾಯವನ್ನು ಕಲ್ಪಿಸಲು ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ, ಬೆಂಗಳೂರು ಅವರು ಕ್ರಮ ಕೈಗೊಳ್ಳಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 1551

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಸಹಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಆರ್ಥಿಕ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾಗಿರುವ "ಕಾರ್ಯದರ್ಶಿ" ಹುದ್ದೆಯನ್ನು "ಕಾರ್ಯದರ್ಶಿ (ಸುಧಾರಣೆ ಮತ್ತು ಪಿಎಂಯು)" ಎಂದು ಪದನಾಮೀಕರಿಸುವ ಕುರಿತು.

**ಓದಲಾಗಿದೆ:** ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 334 ಸಿಡಿಎನ್ 2005 ದಿನಾಂಕ: 15.9.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅಧಿಕೃತ ಜ್ಞಾಪನದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 55 ಸಸಿವಿ 2005 ದಿನಾಂಕ: 14.9.2005ರಲ್ಲಿ ಆರ್ಥಿಕ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾದ ಹಿನ್ನೆಲೆಯಲ್ಲಿ ಸದರಿ ಕಾರ್ಯದರ್ಶಿ ಹುದ್ದೆಯನ್ನು ಒಳಗೊಂಡಂತೆ ಆ ಇಲಾಖೆಯಲ್ಲಿನ ಪ್ರಧಾನ ಕಾರ್ಯದರ್ಶಿ ಹಾಗೂ ಕಾರ್ಯದರ್ಶಿಗಳ ಹುದ್ದೆಗಳಿಗೆ ಕಾರ್ಯಮರುಹಂಚಿಕೆ ಮಾಡಿದ್ದು, ಹಾಗೂ ಸದರಿ ಕಾರ್ಯದರ್ಶಿ ಹುದ್ದೆಯನ್ನು "ಕಾರ್ಯದರ್ಶಿ (ಸುಧಾರಣೆ ಮತ್ತು ಪಿಎಂಯು)" ಎಂದು ಪದನಾಮೀಕರಿಸಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 55 ಸಸಿವಿ 2005, ಬೆಂಗಳೂರು, ದಿನಾಂಕ: 8ನೇ ನವೆಂಬರ್ 2005**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 55 ಸಸಿವಿ 2005 ದಿನಾಂಕ: 14.9.2005ರಲ್ಲಿ ಆರ್ಥಿಕ ಇಲಾಖೆಯಲ್ಲಿ ಹೊಸದಾಗಿ ಸೃಜಿಸಲಾಗಿರುವ "ಕಾರ್ಯದರ್ಶಿ" ಹುದ್ದೆಯನ್ನು "ಕಾರ್ಯದರ್ಶಿ (ಸುಧಾರಣೆ ಮತ್ತು ಪಿಎಂಯು)" ಎಂದು ಪದನಾಮೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1594

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).